# ಶಿಲಾ ಶಿಲ್ಪಿ

# ಬಿ. ಬಸವಣ್ಣ

ಎಲ್. ಶಿವಲಿಂಗಪ್ಪ






ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಗುರು-ಶಿಷ್ಯ ಪರಂಪರೆಯನ್ನುಳಿಸಿದ ಶಿಲ್ಪಿ ಬಸವಣ್ಣ

ಎಲ್. ಶಿವಲಿಂಗಪ್ಪ




**ಕರ್ನಾಟಕ ಶಿಲ್ಪಕಲಾ ಅಕಾಡೆಮಿ**

ಮೇಲ್ಮನೆ, ಕನ್ನಡ ಭವನ
ಜೆ. ಸಿ. ರಸ್ತೆ, ಬೆಂಗಳೂರು – ೫೬೦ ೦೦೨.

'Guru-Shishya Paramparereyannulisida Shilpi Basavanna'
by L. Shivalingappa
Published by Karnataka Shilpakala Academy
Kannada Bhavana, J. C. Road
Bangalore - 560 002.

ಪ್ರಕಾಶಕರು :
**ಪದ್ಮಜಕುಮಾರಿ ಎನ್.**
ರಿಜಿಸ್ಟ್ರಾರ್, ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಮೇಲ್ಮನೆ, ಕನ್ನಡ ಭವನ, ಜೆ. ಸಿ. ರಸ್ತೆ,
ಬೆಂಗಳೂರು – ೨

ಪ್ರತಿಗಳು : ೫೦೦

ವರ್ಷ : ೨೦೦೮

ಬೆಲೆ : ರೂ. ೩೦.೦೦

ಮುಖಪುಟ
ಶಿಲ್ಪ : ಹರಿಹರ

ಮುದ್ರಕರು :
**ಎಂ. ಎಸ್. ಗ್ರಾಫಿಕ್ಸ್**
ನಂ. ೧, ವಿನಾಯಕ ಬಡಾವಣೆ
ಮಾಗಡಿ ಮುಖ್ಯ ರಸ್ತೆ, ಬೆಂಗಳೂರು – ೫೬೦೦೨೩.
ದೂರವಾಣಿ : ೦೮೦–೨೩೪೮೪೨೩೯



# ಅಧ್ಯಕ್ಷರ ನುಡಿ

ಮೈಸೂರು ಕಲೆ-ಸಂಸ್ಕೃತಿ, ಸಾಹಿತ್ಯ ಹಾಗೂ ಇತರ ಕಲೆಗಳಿಗೆ ರಾಜಾಶ್ರಯ ಸಿಕ್ಕಿ ವಿಜೃಂಬಿಸಿ ಬೆಳೆಯಿತು. ಅಲ್ಲದೆ ದೇಶ ವಿದೇಶಗಳಲ್ಲೂ ಹೆಸರು ಗಳಿಸಿತು. ಇದೇ ರೀತಿ ಶಿಲ್ಪಕಲೆಯು ಕೂಡ ತನ್ನದೇ ವೈಶಿಷ್ಟತೆಗಳಿಂದ ಎಲ್ಲರ ಮನಸ್ಸನ್ನು ಸೂರೆಗೊಂಡಿದೆ. ಖ್ಯಾತ ಶಿಲ್ಪ-ಚಿತ್ರಕಲಾವಿದರು, ಕಲೆಯ ಸಾಧಕರು, ರಾಜಗುರುಗಳು, ಗುರುಕುಲ, ಧಾರ್ಮಿಕ, ಮಠಾಧೀಶರಾಗಿ, ಮಾನವ ಜಾಗೃತಿ, ಲೋಕಕಲ್ಯಾಣಕ್ಕಾಗಿ ದುಡಿದ ಮಹಾನ್ ಕಲಾತಪಸ್ವಿ ಶ್ರೀ ಶಿಲ್ಪಿಸಿದ್ಧಾಂತಿ ಸಿದ್ಧಲಿಂಗಸ್ವಾಮಿಗಳು. ಅವರ ಗುರುಕುಲದಲ್ಲಿ ಅವರ ಪರಂಪರೆಯನ್ನು ಉಳಿಸಿ ಸಾಂಪ್ರದಾಯಿಕ ಶಿಲ್ಪಶೈಲಿಯಲ್ಲಿ ಮೈಸೂರು ತನ್ನದೇ ವಿಶಿಷ್ಠ ಶೈಲಿಯಿಂದ ಗುರುತಿಸಿಕೊಂಡು ಅನೇಕ ಶಿಲ್ಪಕಲಾವಿದರು ಹೊರಬಂದು ಬಹು ಎತ್ತರಕ್ಕೆ ಬೆಳೆದಿದ್ದಾರೆ. ಸಾಂಪ್ರದಾಯಿಕ ಶಿಲ್ಪಶೈಲಿಗೆ ಹೊಸತನ ನೀಡಿದ್ದಾರೆ. ಅಂತಹವರಲ್ಲಿ ಶಿಲ್ಪಿ ಬಸವಣ್ಣನವರು ಪ್ರಮುಖರು. ಇವರ ಅನೇಕ ಶಿಲಾಶಿಲ್ಪಗಳು ನಾಡಿನಾದ್ಯಂತ ಇದ್ದು, ಅನೇಕ ದೇವಾಲಯಗಳಲ್ಲಿ ಪೂಜಿಸಲ್ಪಡುತ್ತಿದ್ದು, ತುಂಬಾ ಹೆಸರುಗಳಿಸಿವೆ. ಅಲ್ಲದೆ ಶಿಲೆಯಲ್ಲಿ ಪೂರ್ಣಪ್ರಮಾಣದ ಭಾವಶಿಲ್ಪಗಳು ವಾಸ್ತವವಾಗಿ ಮೂಡಿಬಂದಿದೆ. ಇವರ ಸಂಯೋಜನೆ ಶಿಲ್ಪದ ಭಾವ-ಭಂಗಿ ಎಲ್ಲವು ಗಮನಿಸಬೇಕಾದ ಅಂಶವಾಗಿದೆ. ಇವರ ಶಿಲ್ಪಕಲಾ ವಿಶೇಷತೆ ಶೈಲಿಗಳ ಬಗ್ಗೆ. ಅದು ಬೆಳೆದು ಬಂದ ದಾರಿ ಇದನ್ನು ತಿಳಿಯಲು ಯುವಶಿಲ್ಪಿಗಳಿಗೆ ಸಹಾಯಕವಾಗುವುದು.

ಶಿಲ್ಪಕಲೆಗೆ ಸಂಬಂಧಿಸಿದ ಪುಸ್ತಕ ಯೋಜನೆಯಡಿಯಲ್ಲಿ ಶಿಲ್ಪಕಲಾವಿದರ ಮಾಲಿಕೆಯ ೨೦೦೭-೦೮ನೇ ಸಾಲಿನಲ್ಲಿ ಅಕಾಡೆಮಿಯು ಶಿಲ್ಪಿ ಬಸವಣ್ಣ ಹಾಗೂ ಸಮಕಾಲೀನ ಶಿಲ್ಪದಲ್ಲಿ ಶ್ರೀಮತಿ ಪುಷ್ಪಮಾಲ ಇವರ ಕಲೆ-ಶೈಲಿ, ಮಾಧ್ಯಮ ವಿಶೇಷತೆಗಳನ್ನು ಬಿಂಬಿಸುವ ಈ ಪುಸ್ತಕ ಇದೀಗ ಹೊರಬರುತ್ತಿದೆ.

ಶಿಲ್ಪಿ ಬಸವಣ್ಣ ಇವರ ಪುಸ್ತಕವನ್ನು ಶ್ರೀ ಎಲ್. ಶಿವಲಿಂಗಪ್ಪವನರು ಅತಿ ಮುತುವರ್ಜಿಯಿಂದ ಶ್ರಮವಹಿಸಿ ಬರೆದುಕೊಟ್ಟಿದ್ದು, ಶ್ರೀಯುತರು ಶಿಲ್ಪಿಯ ಬಗ್ಗೆ, ಅವರ ಕೃತಿ, ಶೈಲಿ, ಜೀವನದ ಬಗ್ಗೆ ವಿವರವಾಗಿ ಬರೆದಿದ್ದಾರೆ. ಇದು ವಿದ್ಯಾರ್ಥಿಗಳಿಗೂ, ಕಲಾರಸಿಕರಿಗೂ ಅತ್ಯಂತ ಉಪಯುಕ್ತ ಪುಸ್ತಕವಾಗಿದೆ. ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪರವಾಗಿ ಮತ್ತು ವೈಯಕ್ತಿವಾಗಿ ಶ್ರೀ ಎಲ್. ಶಿವಲಿಂಗಪ್ಪನವರಿಗೆ ವಂದನೆಗಳು. ಈ ಪುಸ್ತಕ ಹೊರತರಲು ಸಹಕರಿಸಿದ ಅಕಾಡೆಮಿಯ ಎಲ್ಲಾ ಸದಸ್ಯರುಗಳಿಗೂ, ರಿಜಿಸ್ಟ್ರಾರ್ ಹಾಗೂ ಸಿಬ್ಬಂದಿ ವರ್ಗದವರಿಗೂ ಹಾಗೂ ಅಂದವಾಗಿ ಮುದ್ರಿಸಿಕೊಟ್ಟ ಎಂ.ಎಸ್.ಗ್ರಾಫಿಕ್ಸ್, ಬೆಂಗಳೂರು ಇವರಿಗೂ ವಂದನೆಗಳು.

**– ವೆಂಕಟಾಚಲಪತಿ**

# ಲೇಖಕರ ನುಡಿ

ಮೈಸೂರಿನ ಶಿಲ್ಪಿ ದಿ॥ ಬಸವಣ್ಣನವರ ಬಗ್ಗೆ ಪುಸ್ತಕ ಬರೆಯಬೇಕೆಂದು ಶಿಲ್ಪಕಲಾ ಅಕಾಡೆಮಿ ಅಧ್ಯಕ್ಷರು ದೂರವಾಣಿ ಕರೆ ಮಾಡಿದಾಗ ನನಗೆ ಅತೀವ ಸಂತೋಷವಾಯಿತು. ಅದಕ್ಕೆ ಮುಖ್ಯ ಕಾರಣ ನಾನು ಚಿತ್ರ ಮತ್ತು ಶಿಲ್ಪಕಲೆಯನ್ನು ಕಲಿತ ಗುರುಕುಲದಲ್ಲಿಯೇ ದಿವಂಗತರು ಸಹ ಕಲಿತವರು. ನನಗಿಂತ ಹಿರಿಯರು, ಪೂಜ್ಯರು. ರಾಜಗುರುಗಳಾದ ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳವರ ಮೆಚ್ಚಿನ ಶಿಷ್ಯರಾಗಿದ್ದವರು. ನಾನಾದರೋ ಸ್ವಾಮಿಗಳ ಪುತ್ರರಾದ ಶ್ರೀ ನಾಗೇಂದ್ರ ಸ್ತಪತಿಗಳವರಲ್ಲಿ ತರಬೇತಿ ಪಡೆದವನು. ಬಸವಣ್ಣನವರು ಮತ್ತವರ ಸಮಕಾಲೀನ ಶಿಲ್ಪಿಗಳು ಮಾಡಿರುವ ಕಾಮಕಾಮೇಶ್ವರಿ ದೇವಾಲಯ, ಭುವನೇಶ್ವರಿ ದೇವಾಲಯ ಶಿಲ್ಪಗಳನ್ನು ಅತ್ಯಂತ ಸನಿಹದಿಂದ ನೋಡಿರುವೆನು. ನಾನು ಸ್ತಪತಿಯವರ ಬಳಿ ಕಲಿಯಲು ಬರುತ್ತಿದ್ದ ವೇಳೆಗಾಗಲೇ ಬಸವಣ್ಣನವರು ಸ್ವತಂತ್ರವಾಗಿ ಮಾಡುತ್ತಾ ಖ್ಯಾತಿಯನ್ನು ಗಳಿಸಿದ್ದರು. ಗುರುಕುಲ, ಬಸವಣ್ಣನವರ ಕಾರ್ಯಾಗಾರ ಮತ್ತು ನಮ್ಮ ಮನೆ ಕೇವಲ ಒಂದೆರಡು ಕಿಲೋಮೀಟರ್ ವ್ಯಾಪ್ತಿಯೊಳಗೆ ತಿರುಗಾಡುವ ಮುಖ್ಯರಸ್ತೆಗೆ ಅಂಟಿಕೊಂಡಂತೆ ಇದ್ದುದರಿಂದ ಅವರ ಕಾರ್ಯಶೈಲಿಯನ್ನು ನೋಡಿದವನಾಗಿದ್ದೆ.

ಬಸವಣ್ಣನವರು ಕಾಲವಾಗಿ ಅನೇಕ ವರ್ಷಗಳೇ ಕಳೆದಿವೆ. ಅವರ ಸಮಕಾಲೀನರು ಹಾಗೂ ಗುರುಗಳ ಬಗ್ಗೆ ಪುಸ್ತಕಗಳಾಗಿ ಇವರದೊಂದು ಆಗಿಲ್ಲವಲ್ಲವೆಂಬ ಕೊರಗನ್ನು ನಿವಾರಿಸಲು ಬರೆಯಲು ಆರಂಭಿಸಿದೆ. ಅವರ ಹಿರಿಯ ಪುತ್ರ ಶಿಲ್ಪಿ ಯೋಗಿರಾಜ ಅವರು ಅನೇಕ ಮಾಹಿತಿ ನೀಡಿದರು. ಅದಕ್ಕಾಗಿ ಅವರಿಗೆ ನನ್ನ ಹೃತ್ಪೂರ್ವಕ ನಮನಗಳು. ಹಾಗೆಯೇ ಛಾಯಾಚಿತ್ರ ಒದಗಿಸಲು, ಮಾಹಿತಿ ತಿಳಿಸಲು ಮಾಡಿದ ವಿಳಂಬ, ಹಲವಾರು ಬಾರಿ ಸುತ್ತಾಡಿಸಿದ ಕ್ರಮವು ನೆನೆಯುವಂತಹುದ್ದೆ. ಲೇಖಕನಿಗಿರಬೇಕಾದ ತಾಳ್ಮೆಯ ಪರೀಕ್ಷೆ ಎಂದು ಭಾವಿಸಿ ಅಧ್ಯಕ್ಷರಿಗೂ ಸಹ ತಿಳಿಸಿ ಲೇಖನಕ್ಕೆ ಪೂರ್ಣ ಸ್ವರೂಪ ಕೊಡಲಾಯಿತು.

ಶಿಲ್ಪಿ ಬಸವಣ್ಣನವರ ಜೀವನ ಸಾಧನೆಯ ಜೊತೆಗೆ ಶಿಲ್ಪಿಗಳಿಗೆ ಅತ್ಯಾವಶ್ಯಕವಾದ ಕಲ್ಲು, ಕಲ್ಲಿನ ಗಣಿ ಸಿಗುವ ಸ್ಥಳ, ಅದರ ಸಾಧಕ ಬಾಧಕಗಳ ಬಗ್ಗೆ ವಿವರಿಸಲಾಗಿದೆ. ಸಾಂಪ್ರದಾಯಿಕ ಶಿಲ್ಪಗಳನ್ನು ಮಾಡುವವರ ಬಗ್ಗೆ ಬರೆಯುವಾಗ ಆಯಾಯ ಶಿಲ್ಪದ ಪುರಾಣಗಳ ಹಿನ್ನೆಲೆ ಮತ್ತು ಶಿಲ್ಪಶಾಸ್ತ್ರಗಳನ್ನರಿತೇ ವಿವರ ನೀಡಬೇಕಾಗುತ್ತದೆ. ಈ ಕೆಲಸವನ್ನು ಸಾಧ್ಯವಾದ ಮಟ್ಟಿಗೆ ನಿರ್ದಿಷ್ಟ ಪುಟಗಳ ಪರಿಮಿತಿಯೊಳಗೆ ಮಾಡಿದ್ದೇನೆ.

ಅಧ್ಯಕ್ಷರಾದ ಶ್ರೀ ವೆಂಕಟಾಚಲಪತಿಯವರು ಅತ್ಯಂತ ಆಸ್ಥೆಯಿಂದ ಓದಿ ಮತ್ತಷ್ಟು ವಿವರ ಸೇರಿಸುವಂತೆ ಪ್ರೇರೇಪಿಸಿ ಪುಸ್ತಕ ರೂಪದಲ್ಲಿ ಬರಲು ಸಹಕಾರಿಯಾಗಿದ್ದಾರೆ. ಅವರಿಗೂ ಹಾಗೂ ಅಕಾಡೆಮಿಯ ಸದಸ್ಯರಿಗೂ ರಿಜಿಸ್ಟ್ರಾರ್ ಅವರಿಗೂ ನನ್ನ ಹೃತ್ಪೂರ್ವಕ ನೆನಕೆಗಳು.

– ಎಲ್. ಶಿವಲಿಂಗಪ್ಪ



ಗಾಯತ್ರಿ – ಅರಮನೆ ಗಾಯತ್ರಿ ದೇವಸ್ಥಾನ

# ಗುರು-ಶಿಷ್ಯ ಪರಂಪರೆಯನ್ನುಳಿಸಿದ ಶಿಲ್ಪಿ. ಬಿ. ಬಸವಣ್ಣ

ಕರ್ನಾಟಕ ಚರಿತ್ರೆಯ ಪುಟಗಳನ್ನು ತಿರುವಿಹಾಕಿದಾಗ ಕಂಡುಬರುವ ಮೌರ್ಯರು, ಶಾತವಾಹನರು, ಗಂಗರು, ಬನವಾಸಿಯ ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲಚೂರಿಗಳು, ಹೋಯ್ಸಳರು, ವಿಜಯನಗರದ ಅರಸರು ಮತ್ತು ಮೈಸೂರರಸರು ರಾಜ್ಯವನ್ನಾಳಿದೆಡೆಯಲ್ಲೆಲ್ಲಾ ದೇವಾಲಯಗಳಾದರೇ ಸುಲ್ತಾನರು ಆಳಿದೆಡೆಯಲ್ಲಿ ಮಸೀದಿಗಳು ಸ್ಮಾರಕಗಳಾದವು. ಧರ್ಮವು ರಾಷ್ಟ್ರ ರಾಜಕಾರಣದಲ್ಲಿ ತಳಕು ಹಾಕಿಕೊಂಡಿರುವುದರಿಂದ ಬೌದ್ಧ, ಜೈನ, ವೈದಿಕ ಮತ್ತು ಮುಸ್ಲಿಂ ಧರ್ಮಗಳಿಗೆ ಸಂಬಂಧಿಸಿದಂತಹುಗಳೇ ನಿರ್ಮಾಣವಾಗಿದೆ. ಇವುಗಳನ್ನು ಒಂದೊಂದು ಶೈಲಿಯೆಂದು ಸಹ ಪರಿಗಣಿಸಬಹುದಾಗಿದೆ. ಜೊತೆಗೆ ಆಯಾಯ ರಾಜರ ಹೆಸರನ್ನು ಸ್ಮರಿಸುವುದಕ್ಕೆ ಮಾರ್ಗದರ್ಶಿಯಾಗಿವೆ. ಹಾಗೆಯೇ ದ್ವೇಷಾಸೂಯೆ, ರಾಜಕೀಯ ದುರ್ಗುಣಗಳಿಂದ ಅವನತಿಗೂ ಕಾರಣವಾಗಿವೆ. ಅಳಿದುಳಿದಿರುವುದೇ ಇಂದು ಸಂಶೋಧಕರಿಗೆ, ಕಲಾ ಆಕಾಂಕ್ಷಿಗಳಿಗೆ, ಬರಹಗಾರರಿಗೆ ತೋರುಬೆರಳಾಗಿ ನಿಂತಿವೆಯೆನ್ನಬಹುದು.

ಈ ದಿಸೆಯಲ್ಲಿ ಮೈಸೂರರಸರ ಕಾಲದಲ್ಲಿ ಅದರಲ್ಲೂ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ನಿರ್ಮಾಣಗೊಂಡ ಅರಮನೆ (೧೮೯೭-೧೯೧೨) ನಂತರದ ಶ್ರೀ ಜಯಚಾಮರಾಜ ಒಡೆಯರ ಕಾಲದಲ್ಲಾದ ದೇವಾಲಯಗಳು ಮುಖ್ಯವಾಗಿದ್ದು, ಅರಮನೆಯೊಳಗಿನ ಚಿತ್ರಕಲೆ, ದೇವಾಲಯದೊಳಗಿನ ಶಿಲ್ಪಕಲೆ ಇವುಗಳು ಒಂದೊಂದು ಆ ಕಾಲದ ರಾಜರ ಆಳ್ವಿಕೆ ವಿಚಾರಗಳನ್ನು ಅರಹುವುದಲ್ಲದೇ ಕವಿಗಳು, ಕಲಾವಿದರು ಮತ್ತು ಶಿಲ್ಪಿಗಳಿಗೆ ಸಂಬಂಧಿಸಿದ ವಿಚಾರಗಳನ್ನು ಬದುಕು ಬವಣೆಗಳನ್ನು ಸಂಶೋಧನಾ ದೃಷ್ಟಿಯಿಂದ ಒಳಹೊಕ್ಕು ನೋಡಿದಾಗ ತೆರೆದುಕೊಳ್ಳುವ ವಿಚಾರಗಳು ಅಗಣಿತ ಅಪಾರ. ಈ ದೃಷ್ಟಿಯಿಂದ ಅವಲೋಕಿಸಿದಾಗ ಶ್ರೀ ಜಯಚಾಮರಾಜ ಒಡೆಯರ ಆಳ್ವಿಕೆಯಲ್ಲಿ ಇದ್ದಂತಹ ಶಿಲ್ಪಿ ಬಸವಣ್ಣನವರ ಜೀವನ ಸಾಧನೆಯನ್ನು ಕುರಿತ ಸಂಶೋಧನಾತ್ಮಕ ವಿಚಾರವೇ ಈ ಪುಸ್ತಕದ ತಿರುಳು.

ಬಸವಣ್ಣನವರು ಶಿಲ್ಪಿಗಳ ಮನೆತನದಿಂದಲೇ ಬಂದವರು. ಅವರ ತಾತ ಚೌಡಪ್ಪನವರು ಮರಗೆತ್ತನೆ ಮತ್ತು ಶಿಲಾಕೆತ್ತನೆ ಎರಡನ್ನು ಮಾಡುತ್ತಿದ್ದರು. ಹಳೆ ಮೈಸೂರು ಭಾಗ ಎಂದು ಗುರುತಿಸುತ್ತಿದ್ದ ಟಿ. ನರಸೀಪುರ ತಾಲ್ಲೂಕಿನ ಸೋಸಲೆ ಹೋಬಳಿ ಮುತ್ತಾಲವಾಡಿ ಕೆಬ್ಬೆಹುಂಡಿ ಗ್ರಾಮದವರು. ಸಾಮಾನ್ಯವಾಗಿ ಹಳ್ಳಿಗಳಲ್ಲಿ ವಾಸಿಸುತ್ತಿದ್ದ ವಿಶ್ವಕರ್ಮರನ್ನು ಆಚಾರಗಳು ಎಂದೇ ಸಂಬೋಧಿಸುತ್ತಿದ್ದರು. ನೆಲೆಸಿದ ಊರಿನ ರೈತ ಸಮುದಾಯಕ್ಕೆ ಅವಶ್ಯಕವಾದ ಎತ್ತಿನ ಬಂಡಿ, ದೇವಾಲಯಗಳಿಗೆ ಬೇಕಾದ ರಥ, ನಾಡಹಬ್ಬ ಮತ್ತು ಜಾತ್ರೆಗಳಲ್ಲಿ ಮೆರೆಸುವ ಗ್ರಾಮದೇವತೆಗಳು ಅಥವಾ ದೇವಾಲಯದಲ್ಲಿ ಸ್ಥಾಪಿಸಲು ಕಲ್ಲಿನ ಮೂರ್ತಿಗಳನ್ನು ಮಾಡುವುದು ಇವೆಲ್ಲಾ ಆಚಾರರುಗಳ ಕೆಲಸವಾಗಿದ್ದು ಜನಪ್ರಿಯವಾಗಿ ಎಲ್ಲರಿಗೂ ಬೇಕಾಗಿರುವಂತಾಗುತ್ತಿದ್ದರು. ತಾವಿರುವ ನೆಲೆಯಲ್ಲಿ ಕೆಲಸಗಳು ಇಲ್ಲದಿದ್ದಾಗ ಪರ ಊರಿಗೆ ಹೋಗುತ್ತಿದ್ದುದು ಅನಿವಾರ್ಯ. ಹಾಗೆಯೇ ಚೌಡಪ್ಪನವರು ಸುಮಾರು ೨೦ ವರ್ಷ ಮೈಸೂರು ಜಿಲ್ಲೆ ನಂಜನಗೂಡು ತಾಲ್ಲೂಕಿನ ದಾಸೋಹಕ್ಕೆ ಹೆಸರಾದ ಗುರುಮಲ್ಲೇಶ್ವರರ ಮಠದಲ್ಲಿನ ಎಲ್ಲಾ

ಮರಗೆಲಸ, ವಿಗ್ರಹ, ಕಟ್ಟಡಗಳ ಸಹಿತ ಜವಾಬ್ದಾರಿ ಹೊತ್ತು ಕೆಲಸ ಮಾಡುತ್ತಾ ನೆಲೆನಿಂತಿದ್ದರು. ಗುರುಮಲ್ಲೇಶ್ವರರಾದರೋ ಕಂತೆಭಿಕ್ಷ ಮಾಡಿ ತಂದು ಅಲ್ಲಿನ ಬಡಜನತೆಗೆ, ವಿದ್ಯಾರ್ಥಿಗಳಿಗೆ ಮತ್ತು ಯಾರೇ ಹೋದರೂ ದಾಸೋಹ ಮಾಡಿಸುತ್ತಿದ್ದ ಮಹಾಮಹಿಮಾನ್ವಿತರು. ಅವರ ಅನುಗ್ರಹದಿಂದಲೇ ಬೆಳವಣಿಗೆಯಾಯಿತೆಂದು ನಂಬಿದ್ದ ಚೌಡಪ್ಪನವರು ಮಗ ಬಸಪ್ಪಾಚಾರ್‌ರನ್ನು ಒಳ್ಳೆಯ ಕುಶಲಕರ್ಮಿಯನ್ನಾಗಿ ರೂಪಿಸಿದರು. ಅವರ ಪುತ್ರರೇ ಬಸವಣ್ಣ (ಜ-೧೯೨೧) ಹುಟ್ಟೂರು ತಾತನ ಊರಾದ ಮುತ್ತಲವಾಡಿ ಕೆಬ್ಬೆಹುಂಡಿ.

ಊರಿಗೆ ಪ್ಲೇಗ್, ಕಾಲರಾದಂತಹ ಅಂಟುರೋಗ ಬರಲಿಕ್ಕಾಗಿ ಅನಿವಾರ್ಯವಾಗಿ ಊರನ್ನು ಬಿಡಬೇಕಾಗಿ ಬರುತ್ತದೆ. ಜೊತೆಗೆ ನೆಲೆಸಿದ ಗ್ರಾಮದಲ್ಲಿ ಬರದ ಬವಣೆ. ಇವೆಲ್ಲದರ ಹಿನ್ನೆಲೆಯಲ್ಲಿ ಬಸಪ್ಪಚಾರ್ ಮಗನನ್ನು ಮೈಸೂರಿನ ಶಿಲ್ಪಸಿದ್ಧಾಂತಿ ಸಿದ್ಧಲಿಂಗಸ್ವಾಮಿಗಳ ಬಳಿಯಲ್ಲಿ ವಿದ್ಯಾಭ್ಯಾಸಕ್ಕಾಗಿ ಬಿಡಬೇಕೆಂದು ಮನದಲ್ಲಿ ನಿರ್ಧರಿಸಿ ಸ್ವಾಮೀಜಿಯವರನ್ನು ದರ್ಶಿಸುವ ಬಗೆಯಾದರೂ ಹೇಗೆಂದು ಚಿಂತಿಸುತ್ತಾ ಬರುತ್ತಾರೆ. ಇದಕ್ಕೆ ಮುಖ್ಯ ಕಾರಣ ಸ್ವಾಮಿಗಳು ಜಯಚಾಮರಾಜ ಒಡೆಯರ್ ಅವರಿಗೆ ರಾಜಗುರುವಾಗಿ ಮೇಲುಸ್ತರದಲ್ಲಿದ್ದುದು ಒಂದೆಡೆಯಾದರೇ ಕಲಾವಿದರಾಗಿ ಶಿಲ್ಪಿಯಾಗಿ ಬಿಡುವಿಲ್ಲದಷ್ಟು ಕೆಲಸವನ್ನು ಹೊಂದಿದವರಾಗಿದ್ದರು. ಒಂದೆಡೆ ಅರಮನೆ ಕಟ್ಟಡ ನಿರ್ಮಾಣವಾಗಿದ್ದು ಅಲಂಕಾರಕ್ಕಾಗಿ ಶೃಂಗಾರದ ಕೆಲಸ ನಡೆಯುತ್ತಿತ್ತು. ಇವುಗಳಲ್ಲೆಲ್ಲಾ ಸ್ವಾಮೀಜಿಯವರ ಪಾತ್ರ ಹಿರಿದಾಗಿದ್ದರೂ ಯಾರಾದರೂ ತಮ್ಮನ್ನು ಹುಡುಕಿಕೊಂಡು ಬಂದರೇ ಅವರನ್ನು ಒಂದೆರಡು ದಿನದ ಮಟ್ಟಿಗಾದರೂ ತಮ್ಮ ಮಠದಲ್ಲಿರಿಸಿಕೊಂಡು ಅವರ ಯೋಗಕ್ಷೇಮ ವಿಚಾರಿಸುತ್ತಿದ್ದರು. ಇದನ್ನು ತಿಳಿದಿದ್ದ ಬಸಪ್ಪಾಚಾರ್ ಅವರನುಕೂಲ ಸಂದರ್ಭದಲ್ಲಿ ತಮ್ಮ ಕಷ್ಟವನ್ನರುಹಿ ಅವಕಾಶ ಪಡೆಯುತ್ತಾರೆ.

## ವಿದ್ಯಾಭ್ಯಾಸ – ಕಲಿಕೆ

ಒಂಬತ್ತು ವರ್ಷದ ಬಾಲಕನಾಗಿ ಬಂದ ಬಸವಣ್ಣ (೧೯೩೦-೫೦) ಆ ಇಪ್ಪತ್ತು ವರ್ಷಗಳಲ್ಲಿ ಕಲಿತದ್ದು ಅಪಾರ. ಸ್ವಾಮಿಗಳಲ್ಲಿನ ವಿದ್ಯೆ ಒಂದು ವಿಶ್ವವಿದ್ಯಾಲಯದೋಪಾದಿಯಲ್ಲಿದ್ದುದರಿಂದ ಅದನ್ನು ಅವರವರ ಯಥಾನುಶಕ್ತಿ ಪಡೆಯಬಹುದಾಗಿತ್ತು. ಬಾಲಕ ಬಸವಣ್ಣನಿಗೆ ವಿದ್ಯಾಭ್ಯಾಸ ಮಾಡುವ ತವಕವಿದ್ದಹಾಗೆ ದೈನಂದಿನ ತುತ್ತಿನ ಚೀಲವನ್ನು ತುಂಬುವಿಕೆಯು ಅವಶ್ಯವೆನಿಸಿತ್ತು. ಹೀಗೆ ಕಲಿಯಲಿಚ್ಛಿಸಿ ಬಂದವರು ಅನೇಕ. ಶಿಲ್ಪಿ ಸಿದ್ಧಲಿಂಗ ಸ್ವಾಮಿಗಳ ಶಿಷ್ಯರಲ್ಲಿ ಚಿತ್ರಕಲೆ ಕಲಿತು ಅದನ್ನು ರೂಢಿಸಿಕೊಂಡು ಬಂದವರಲ್ಲಿ ಅವರ ಪುತ್ರ ನಾಗೇಂದ್ರ ಸ್ತಪತಿಗಳು ಮತ್ತು ಸುಭಾಷಿಣಿದೇವಿ ಮುಖ್ಯರಾಗುತ್ತಾರೆ. ಉಳಿದಂತೆ ಅವರ ಬಳಿಯಲ್ಲಿ ಅಭ್ಯಾಸ ಮಾಡುತ್ತಿದ್ದ ಇಲ್ಲವೇ ಸಹಾಯಕರಾಗಿ ಬಂದ ಶಿಲ್ಪಿಗಳು ಒಂದು ಶಿಲ್ಪವನ್ನು ಕಡೆಯಲು ಅಗತ್ಯವೆನಿಸುವ ರೂಪ, ಆಕಾರಗಳನ್ನು ಬರೆಯುವ ಮಟ್ಟಕ್ಕೆ ಮಾತ್ರ ಕಲಿತವರಾಗಿರುತ್ತಿದ್ದರು. ಅದಕ್ಕಾಗಿಯೇ ಶಿಲ್ಪಿ ಸಿದ್ಧಲಿಂಗಸ್ವಾಮಿಗಳವರಲ್ಲಿ ಕಲಿಯಲು ಅಪೇಕ್ಷಿಸಿ ಬರುವವರಿಗೆ ಒಂದು ಕಡ್ಡಾಯ ನಿಯಮವಿತ್ತು. ಗುರುಕುಲ ಪದ್ಧತಿಯಂತೆ ಪ್ರಾತಃಕಾಲದಲ್ಲೆದ್ದು ಸ್ನಾನ ಧ್ಯಾನ, ಪೂಜಾದಿಗಳಿಗೆ ಮಹತ್ವ ಕೊಡಬೇಕಾಗಿತ್ತು. ಕೆಲವರು ಸ್ವಾಮಿಗಳ ಪೂಜೆ ಅರ್ಚನೆಗೆ ಪುಷ್ಪಾದಿಗಳನ್ನು ತರುವುದಾದರೇ ಮತ್ತಷ್ಟು ಶಿಷ್ಯರು ಪೂಜಾದಿಗಳಿಗೆ ಅಣಿ ಮಾಡಬೇಕಾಗಿತ್ತು. ಅವರು ಪೂಜೆ ಪೂರೈಸಿ ಬರುವವರೆಗೆ ಇನ್ನಿತರ ಇಲ್ಲಾ ಶಿಷ್ಯರು ಸಂಸ್ಕೃತ ಶ್ಲೋಕಗಳನ್ನು, ಅಮರಕೋಶವನ್ನು ಕಂಠಪಾಠ ಮಾಡಬೇಕಾಗಿತ್ತು. ಧ್ಯಾನ ಶ್ಲೋಕಗಳಿಗೆ ಆದ್ಯತೆ ನೀಡುತ್ತಿದ್ದರು. ಶಿಲ್ಪಾಭ್ಯಾಸವೇ ಮುಖ್ಯ ಗುರಿಯಾದುದರಿಂದ ಪ್ರತಿ ವಿಗ್ರಹ ಮಾಡುವಾಗಲೂ ಅದರ ಆಕಾರ, ಸ್ವರೂಪ ಮತ್ತು ಹಿನ್ನೆಲೆ, ಅಳವಡಿಸಬೇಕಾದ ಆಭರಣ, ವಸ್ತ್ರಗಳು, ಪೀಠ, ಆಯಾಯ ದೇವತೆಗಳಿಗೆ ಪೂರಕವಾದ ವಾಹನಗಳು, ಪುರುಷ ದೇವತೆಗಳು ಸ್ತ್ರೀ

ದೇವತೆಗಳು, ಪರಿವಾರ ದೇವತೆಗಳು, ಪ್ರಧಾನ ದೇವತೆಗಳು ಇವುಗಳಿಗೆ ಸಂಬಂಧಿಸಿದಂತೆ ಧ್ಯಾನ ಶ್ಲೋಕಗಳು ಆಗಮ ಶಾಸ್ತ್ರದಲ್ಲಿ ವಿಪುಲವಾಗಿದ್ದುದರಿಂದ ಸಂಸ್ಕೃತ ಅಭ್ಯಾಸ ಮತ್ತು ಕಂಠಪಾಠ ತೀರ ಅವಶ್ಯಕವಾಗಿದ್ದು ಶಿಲ್ಪಾಭ್ಯಾಸಿಯ ಮನಸ್ಸಿನ ಮೇಲೆ ಗಾಢ ಪರಿಣಾಮವನ್ನುಂಟು ಮಾಡುತ್ತಿದ್ದವು. ಬೆಳಿಗ್ಗೆ ಏನನ್ನು ಕಂಠಪಾಠ ಮಾಡಿದರೋ ಅದು ಕಲ್ಲಿನಲ್ಲಿ ಕೆತ್ತುವ ಅಥವಾ ಕೆತ್ತುವವರನ್ನು ನೋಡುವ ಅವಕಾಶ ನಿತ್ಯವೂ ಒದಗುತ್ತಿದ್ದುದರಿಂದ (Theory and Practical) ಅಭ್ಯಾಸಿಗಳ ಮನದಾಳದಲ್ಲಿ ಅಚ್ಚಳಿಯದೇ ನಿಲ್ಲುತ್ತಿದ್ದವು. ದೇವತೆಗಳ ಕೈಯಲ್ಲಿ ಹಿಡಿಯುವ ಆಯುಧಗಳ ರೀತಿ, ಪಾದಗಳ ಮುಂಚಾಚು ಅಥವಾ ಹಿಂಚಾಚು, ಪ್ರಭಾವಳಿಗೆ ಅಗತ್ಯವಾದ ವ್ಯಾಘ್ರವ್ಯಾಳಿ, ಮಕರವ್ಯಾಳಿ ಮತ್ತು ಹೂಬಳ್ಳಿಗಳ ವಿನ್ಯಾಸ, ಬೆರಳುಗಳ ಬಾಗುವಿಕೆಯಲ್ಲಿನ ಕಲಾತ್ಮಕತೆ ತೋರುವ ವಿಧಾನ, ದೈಹಿಕಾಭರಣಗಳನ್ನು ಬರೆಯುವ ವಿಧಾನ, ಕಿರೀಟಗಳ ಶೈಲಿ, ಶೈವ ಮತ್ತು ವೈಷ್ಣವ ಸಂಸ್ಕೃತಿಗಳಿಗನುಗುಣವಾದ ಉಡುಗೆ ತೊಡುಗೆ, ಆಭರಣ ಇವುಗಳನ್ನು ಪ್ರತ್ಯೇಕವಾಗಿ ಸೀಸದ ಕಡ್ಡಿಯಿಂದ ಕಾಗದದ ಮೇಲೆ ಬರೆದು ಸ್ವಾಮಿಗಳು ತೋರಿಸುತ್ತಿದ್ದರು. ಶಿಷ್ಯರು ಹತ್ತಾರು ಬಾರಿ ಬರೆದು ಅನುಕರಣೆ ಮಾಡಿ ಕಂಠಪಾಠದಂತೆಯೇ ಕೈಪಾಠ ಮಾಡಬೇಕಾಗಿತ್ತು. ದೈನಂದಿನ ಜೀವನಕ್ಕೆ ಅಗತ್ಯವಾದ ಆಹಾರ ಸೇವನೆ ನಿದ್ರೆಯನ್ನು ಹೊರತುಪಡಿಸಿದಂತೆ ದಿನದ ಬಹು ಸಮಯವನ್ನು ರೇಖಾಚಿತ್ರ ರಚಿಸುವುದು, ಅದನ್ನು ಕಲ್ಲಿನಲ್ಲಿ ಕೆತ್ತುವ ಪ್ರಯತ್ನ ಮಾಡುವುದು ಇಲ್ಲವೇ ಹಿರಿಯ ಶಿಲ್ಪಿಗಳಿಗೆ ಸಹಾಯಕವಾಗಿ ಕೆಲಸದ ಮರ್ಮವನ್ನು ತಿಳಿಯುತ್ತಾ ಹೋಗುವುದು ಇದು ದೈನಂದಿನ ಕಾರ್ಯಚಟುವಟಿಕೆಯಾಗಿತ್ತು. ಸ್ವಾಮಿಗಳ ಶಿಷ್ಯರಲ್ಲಿ ಬಸವಣ್ಣನವರು ಒಬ್ಬರಾದುದರಿಂದ ಕಲಿಯಬೇಕೆಂಬ ಉತ್ಕಟಾಕಾಂಕ್ಷೆ ತೀವ್ರವಾಗಿದ್ದುದರಿಂದ ಸ್ವಾಮಿಗಳು ಹೇಳಿದುದನ್ನು ಚಾಚು ತಪ್ಪದೇ ಕಲಿತು ಅವರಿಂದ ಸೈ ಎನಿಸಿಕೊಂಡ ಹಿರಿಮೆ ಅವರದಾಗಿತ್ತು. ಅಚ್ಚುಮೆಚ್ಚಿನ ಶಿಷ್ಯರಾಗಿದ್ದರು.

ಇಲ್ಲಿ ಕಲಿಯಬೇಕಾದದ್ದು ಹಲವು ಬಗೆ, ಬಂದ ಗ್ರಾಹಕನ ಮನವೊಲಿಕೆ ಮಾಡುವ ವಿಧಾನ, ಅವುಗಳ ಬೆಲೆ ನಿರ್ಧರಿಸುವ ರೀತಿ ರಿವಾಜು, ನಿಗದಿತ ಸಮಯದಲ್ಲಿ ಮಾಡಿಕೊಡಲು ಅನುಸರಿಸಬೇಕಾದ ಮಾರ್ಗ, ಒಂದು ವೇಳೆ ಆಗದಿದ್ದರೆ ಅದರಿಂದಾದ ಪರಿಣಾಮವನ್ನು ಧೈರ್ಯದಿಂದ ನಿಭಾಯಿಸುವಿಕೆ, ಗ್ರಾಹಕನ ಮನಃಸ್ಥಿತಿ, ಒಪ್ಪಿಕೊಂಡ ಕೆಲಸವನ್ನು ಮಾಡದೇ ಸಹಶಿಲ್ಪಿಗಳು ಗೈರುಹಾಜರಾದಲ್ಲಿ ಆಗುವ ತೊಂದರೆ ಇತ್ಯಾದಿ ಸಾರ್ವಜನಿಕ ಸಂಪರ್ಕಾನುಭವಗಳನ್ನು (Public Relation) ಗಳಿಸಿಕೊಳ್ಳುವುದು ಒಂದೆಡೆಯಾದರೇ ಸ್ವಾಮಿಗಳನ್ನು ದರ್ಶಿಸಲು ಮಹಾರಾಜರು ಮತ್ತವರ ಸಿಬ್ಬಂದಿ ವರ್ಗ, ಕವಿಗಳು, ಸಂಗೀತಗಾರರು, ಶಾಸ್ತ್ರಸಂಪನ್ನರು, ಆಗಮಿಕರು, ಯಂತ್ರ, ತಂತ್ರ ಮಂತ್ರ ಮಾಡಲಿಚ್ಛಿಸಿಕೊಳ್ಳುವವರು, ಹೀಗೆ ಹಲವು ಹತ್ತು ತೆರನಾದ ಜನರಾಗಮನವನ್ನು ಸನಿಹದಿಂದ ನೋಡಿ ಜ್ಞಾನಾರ್ಜನೆಯನ್ನು ವೃದ್ಧಿಸಿಕೊಳ್ಳಲು ಸಹಾಯಕವಾದವು.

ಆ ಎರಡು ದಶಕಗಳು ಕಲಾದೃಷ್ಟಿಯಿಂದ ಅಭೂತಪೂರ್ವ ಕೆಲಸಗಳು ನಡೆದಂತ ಸಮಯ. ಒಂದೆಡೆ ಕಟ್ಟಡ ಪೂರ್ಣಗೊಂಡ ಅರಮನೆಯನ್ನು ಚಿತ್ತಾರಗಳಿಂದ ಶೃಂಗಾರಗೊಳಿಸಲು ಕಲಾವಿದರ ದಂಡೆ ಕೆಲಸಮಾಡುತ್ತಿತ್ತು. ನಾಲ್ವಡಿ ಕೃಷ್ಣರಾಜ ಒಡೆಯರ್‌ರವರಿಗೆ ತೀರ ಹತ್ತಿರವಾದ ಕಲಾವಿದ ಕೆ. ವೆಂಕಟಪ್ಪನವರು (ಇವರ ಹೆಸರಿನಲ್ಲಿ ಬೆಂಗಳೂರಿನಲ್ಲೊಂದು ಕಲಾ ಗ್ಯಾಲರಿ ಇದೆ ಮತ್ತು ನಿಷ್ಣಾತ ಕಲಾವಿದರೋರ್ವರಿಗೆ ವರ್ಷಕ್ಕೊಮ್ಮೆ ರಾಜ್ಯಮಟ್ಟದ ಪ್ರಶಸ್ತಿ ಜೊತೆಗೆ ೧ ಲಕ್ಷ ರೂ. ಮೊತ್ತ ಸರ್ಕಾರ ನೀಡುತ್ತಿದೆ.) ಅರಮನೆಯ ಹಿರಿಯ ಕಲಾವಿದ ಕೇಶವಯ್ಯನವರ ನೇತೃತ್ವದಲ್ಲಿ ಶಂಕರರಾಜು, ವೈ.ನಾಗರಾಜು, ವೈ. ಸುಬ್ರಮಣ್ಯರಾಜು, ಎಸ್. ನರಸಿಂಹಸ್ವಾಮಿ, ಎಸ್. ನಂಜುಂಡಸ್ವಾಮಿ, ಎಸ್.ಆರ್. ಅಯ್ಯಂಗಾರ್ ಮುಂತಾದ ಕಲಾ ದಿಗ್ಗಜಗಳಿಂದ ದಸರಾ ಮೆರವಣಿಗೆ ನೋಟಗಳನ್ನು ಸೃಷ್ಟಿಸುವ ಕೆಲಸ ಒಂದೆಡೆ

ನಡೆಯುತ್ತಿದ್ದರೆ ಅವುಗಳಿಗೆ ಪೂರಕವಾಗಿ ಕಣ್ಣಿಗೆ ಕಟ್ಟುವಂತೆ ಅರಮನೆಯಲ್ಲಿ ಪ್ರತಿ ವರ್ಷ ನಡೆಯುತ್ತಿದ್ದ ದರ್ಬಾರು, ಸಮವಸ್ತ್ರ ಧರಿಸಿದವರ, ಸೈನಿಕರ, ವಂದಿ ಮಾಗದರ, ಪರಾಕು ಹೇಳುವವರ, ಆನೆ ಕುದುರೆ ಪದಾತಿ, ಕಾಲ್ದಳಗಳ, ವಿವಿಧ ವಾದ್ಯ ನುಡಿಸುವವರ ಪೋಷಾಕು, ಗತ್ತು ಗೈರತ್ತುಗಳನ್ನು ನೋಡಿ ಅರಿಯಲು ಸಹಕಾರಿಯಾದವು.

ಮತ್ತೊಂದೆಡೆಯಲ್ಲಿ ಮುಡುಗೋಡು ಹಿರಣ್ಯಪ್ಪ, ಅಂಕಪ್ಪಾಚಾರ, ಬಸವಯ್ಯ ಮುಂತಾದ ಶಿಲ್ಪಿಗಳಿಂದ ಶ್ರೀಗಂಧ, ದಂತ ಮತ್ತು ಪಂಚಲೋಹಗಳಿಂದ ವಿಗ್ರಹ ಮತ್ತು ಅಲಂಕಾರಿಕ ವಸ್ತ್ರಗಳನ್ನು ತಯಾರಿಸುತ್ತಿದ್ದ ಕ್ರಮ, ಶ್ರೀ ಜಯಚಾಮರಾಜ ಒಡೆಯರ್‌ರವರ ದೇಹ ದಾರ್ಢ್ಯಕ್ಕನುಗುಣವಾಗಿ ಸಿಂಹಾಸನವನ್ನು ನವೀಕರಿಸುವಲ್ಲಿ ಸ್ವರ್ಣ ಶಿಲ್ಪಿ ಸಿಂಗಣ್ಣಾಚಾರ್ಯರು ಕೆಲಸ ಮಾಡುತ್ತಿದ್ದ ಶೈಲಿ, ನಕಾಶೆ ಕೆಲಸ, ಅರಗು ಕಟ್ಟುವ ರೀತಿ, ಹೀಗೆ ಚಿನ್ನ ಬೆಳ್ಳಿಯ ಕುಶರಿ ಕೆಲಸ ಮಾಡುವವರೊಡನಾಟ ಇಲ್ಲವೇ ದೂರದಿಂದಲೇ ನೋಡಿ ಗ್ರಹಿಸಲು ಅವಕಾಶ ಇವೆಲ್ಲವೂ ಗ್ರಾಮಾಂತರದಿಂದ ಬಂದ ಬಸವಣ್ಣನವರಿಗೆ ಒಂದು ಹೊಸ ಜೀವನವನ್ನೇ ತೆರೆದಿಟ್ಟಂತಾಗಿತ್ತು.

ಅರಮನೆಯ ದರ್ಬಾರ್ ಹಾಲನ್ನು ಇಂದ್ರನ ಸಭಾಭವನದಂತೆ ಪರಿವರ್ತಿಸುವ ಕೆಲಸ ಸ್ವಾಮಿಗಳದಾಗಿತ್ತು. ಅಲ್ಲಿನ ಸಪ್ತ ಕಮಾನುಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ಸಭೆಗಳಂತೆ ಚಿತ್ರಿಸಿ ಅವುಗಳಿಗೆ ಸುಂದರವಾದ ಹೂಬಳ್ಳಿಗಳ ಮೆರಗನ್ನು ನೀಡುವವರ ತಂಡದಲ್ಲಿ ನಾಗೇಂದ್ರ ಸ್ತಪತಿಗಳು. ಅಪ್ಪಾಜಿಸ್ವಾಮಿ ಒಂದೆಡೆ ಕೆಲಸ ಮಾಡುತ್ತಿತ್ತು. ಆಡಳಿತ ನಡೆಸಬೇಕಾದರೆ ಶಕ್ತಿ (Power) ಅತ್ಯಾವಶ್ಯಕ. ಆ ಶಕ್ತಿಯ ಧಾತರಾದ ಚಾಮುಂಡೇಶ್ವರಿ, ರಾಜರಾಜೇಶ್ವರಿ, ಭುವನೇಶ್ವರಿ, ನವದುರ್ಗಾದೇವಿ, ಗಾಯಿತ್ರಿ, ಕಾಳಿಕಾದೇವಿ, ಲಕ್ಷ್ಮೀ, ಸರಸ್ವತಿಯಂತಹ ಪ್ರಧಾನ ದೇವತೆಗಳ ಚಿತ್ರವನ್ನು ಸ್ವಾಮಿಗಳೇ ರಚಿಸುತ್ತಿದ್ದುದರಿಂದ ಅದನ್ನು ತೀರಾ ಸನಿಹದಿಂದ ನೋಡಲು ಅವಕಾಶ, ಇವುಗಳ ನಡುವೆ ಸಂಸ್ಕೃತಮಯವಾಗಿದ್ದ ವೇದಗಳನ್ನು ಅರ್ಥಸಹಿತ ಕನ್ನಡಕ್ಕೆ ತರುವ ಭಾಷಾ ವಾಙ್ಮಯ ಕೆಲಸ, ಸಭೆ ಸಮಾರಂಭ ಒಂದೇ ಎರಡೇ!

ಅರಮನೆಯನ್ನು ಸುಂದರಗೊಳಿಸುವುದರ ಜೊತೆಗೆ ಸ್ವಾಮಿಗಳು ತಮ್ಮ ನೆಲೆಯನ್ನು ಭದ್ರಪಡಿಸಿಕೊಳ್ಳುವುದರ ಅವಶ್ಯಕತೆ ಇತ್ತು. ತತ್ಪರಿಣಾಮ ವಾಸಿಸುತ್ತಿದ್ದ ಇವರ ಗುರುಗಳಾದ ನಾಗಲಿಂಗಸ್ವಾಮಿಗಳ ಮಠವನ್ನು ನವೀಕರಣ ಮಾಡುವುದು ಸೇರಿದಂತೆ ಅರಮನೆ ಆನೆ ಕರೋಟಿಯ (ಆನೆ ಕಟ್ಟುತ್ತಿದ್ದ ಸ್ಥಳ) ಸ್ವಲ್ಪ ಭಾಗವನ್ನು ಅಂದರೇ ಸುಮಾರು ಮೂರು ಎಕರೆಯಷ್ಟು ಗುರುಕುಲ ನಿರ್ಮಾಣಕ್ಕಾಗಿ ಮಹಾರಾಜರು ದಾನ ನೀಡಿದುದರ ಅಂಗವಾಗಿ ಅಲ್ಲಿ ನೂರಾ ಒಂದು ಲಿಂಗ ಸ್ಥಾಪನೆ, ಅದರ ಸುತ್ತಲೂ ವಿದ್ಯಾರ್ಥಿಗಳಿಗೆ ಕೋಣೆ, ಕಲ್ಕೆತ್ತನೆಗೆ ಸ್ಥಳ, ಪೂರ್ಣಗೊಂಡ ವಿಗ್ರಹಗಳನ್ನಿಡುವುದಕ್ಕೆ ಪ್ರದರ್ಶನಾಂಗಣ (show room) ದಂತಹ ವಾಸ್ತು ಕೆಲಸಗಳು, ಇದಲ್ಲದೇ ಶಿಲ್ಪ ದೃಷ್ಟಿಯಿಂದ ಚಿರಸ್ಮರಣೀಯವಾದ ಕಾಮಕಾಮೇಶ್ವರಿ ದೇವಸ್ಥಾನದ ನಿರ್ಮಾಣ ಕಾರ್ಯ, ಅರಮನೆಯೊಳಗೆ ಭುವನೇಶ್ವರಿ ಅಮ್ಮನವರ ದೇವಾಲಯಕ್ಕೆ ಅಗತ್ಯವಾದ ಹಲವಾರು ವಿಗ್ರಹಗಳ ಕೆತ್ತನೆ ಮತ್ತದರ ಮೇಲ್ವಿಚಾರಣೆ ಇವೆಲ್ಲವೂ ಕಾರ್ಯೋನ್ಮುಖವಾಗುತ್ತಿದ್ದುದರಿಂದ ಸ್ವಾಮಿಗಳ ಶಿಷ್ಯರಾದ ಬಸವಣ್ಣನವರು ತಮ್ಮ ಸೂಕ್ಷ್ಮಗ್ರಾಹಿತನದಿಂದ ದುಂಬಿಯು ಹೂವಿನಿಂದ ಹೂವಿಗೆ ಹಾರಿ ಮಕರಂದವನ್ನು ಹೀರುವಂತೆ ಒಂದು ವಿಷಯದಿಂದ ಮತ್ತೊಂದು ವಿಷಯದತ್ತ ಗಮನ ಹರಿಸಿ ಅದರಲ್ಲಿನ ವ್ಯವಹಾರಿಕ ಗುಣಗಳನ್ನು ಶಿಲ್ಪಕಲೆಯ ಜೊತೆ ಜೊತೆಗೆ ಕಲಿತರು. ಒಂದನೇ ತರಗತಿಯಿಂದ ಪಿಎಚ್.ಡಿ. ಮಾಡಬೇಕಾದರೆ ಎಷ್ಟು ವರ್ಷಗಳು ಅಗತ್ಯವೋ ಹಾಗೆ ಬಸವಣ್ಣನವರು ಶಿಲ್ಪಕಲೆಯಲ್ಲಿ ಪಿಎಚ್.ಡಿ. ಮಾಡಬಹುದಾದುದಕ್ಕಿಂತ ಹೆಚ್ಚಿನ ವರ್ಷಗಳಲ್ಲಿ ಉನ್ನತ ಮಟ್ಟದಲ್ಲಿ ಕಲಿತರೆನ್ನಬಹುದು.

'ಓದು ಒಕ್ಕಾಲು
ಬುದ್ಧಿ ಮುಕ್ಕಾಲು'

ಎಂಬ ಗಾದೆಮಾತಿನಂತೆ ಬಸವಣ್ಣನವರು ಓದಿದ್ದು ಏಳನೇ ತರಗತಿಯಾದರೂ ಕಲಿತದ್ದು, ಅರಿತದ್ದು ಮತ್ತದನ್ನು ಅನುಷ್ಠಾನಗೊಳಿಸಿದುದು ಅಪಾರ. ಸರ್ಕಾರಿ ಸರ್ಟಿಫಿಕೇಟ್ ಪಿಎಚ್.ಡಿ.ಯಾಗದೇ ಸಾರ್ವಜನಿಕ ಮಾನ್ಯತೆ ಪಡೆದ ಪಿಎಚ್.ಡಿ.ಗಳಿಸಿದ್ದರೆಂಬುದೇ ಅಗ್ಗಳಿಕೆಯ ವಿಷಯ.



**ಗೊಮ್ಮಟೇಶ್ವರ**



ಕೆತ್ತನೆಯಲ್ಲಿ ಶಿಲ್ಪಿ ಬಸವಣ್ಣ

# ಸ್ವತಂತ್ರ ಪ್ರಜ್ಞೆ-ಕೆತ್ತಿದ ಶಿಲ್ಪಗಳು

ಯಾರಿಗಾದರೂ ವಿದ್ಯಾಭ್ಯಾಸ ಒಂದು ಮಟ್ಟ ಮುಟ್ಟಿದ ನಂತರ ತಾನು ಕಲಿತದಕ್ಕನುಗುಣವಾಗಿ ಕೆಲಸವನ್ನರಸುವುದು ಸಹಜ ಕ್ರಿಯೆ. ಬಸವಣ್ಣನವರು ಇದಕ್ಕೆ ಹೊರತಲ್ಲ. ಆಗ್ಗೆ ಸ್ವಾಮಿಗಳ ನೇತೃತ್ವದಲ್ಲಿ ನಡೆಯುತ್ತಿದ್ದ ಕಾಮಕಾಮೇಶ್ವರಿ ದೇವಸ್ಥಾನದ ಬಹುತೇಕ ಕೆಲಸಗಳು ಪೂರ್ಣವಾಗಿತ್ತು. ಅಲ್ಲಿನ ಅತ್ಯುನ್ನತ ಕುಶರಿ ಕೆಲಸವುಳ್ಳ ನಂದಿಮೂರ್ತಿ ಪೂರ್ಣ ಸ್ವರೂಪ ಪಡೆದದ್ದು ೧೯೫೪ರಲ್ಲಿ. ಉಳಿದ ಕೆಲಸಗಳನ್ನು ಅಲ್ಲಿಯೇ ಮಾಡಬಹುದಾಗಿದ್ದರೂ ಬಸವಣ್ಣನವರ ಮನದ ತುಡಿತ ಸ್ವತಂತ್ರವಾಗಿರಬೇಕೆಂದೆನಿಸುತ್ತಿತ್ತು. ತಮ್ಮದೇ ನೆಲೆಯನ್ನು ಕಂಡುಕೊಳ್ಳಲು ಯತ್ನಿಸಿದ ಪ್ರಥಮ ಫಲವಾಗಿ ಅರಸಿಕೆರೆ ಆರ್ಯ ವೈಶ್ಯ ಮಂಡಳಿಗೆ ಕೆಲವು ದೇವತಾ ವಿಗ್ರಹಗಳ ಬೇಡಿಕೆ ಬರುತ್ತದೆ. ನಗರೇಶ್ವರ, ಕನ್ನಿಕಾ ಪರಮೇಶ್ವರಿ, ನಂದಿ, ನವಗ್ರಹ, ಗಣಪತಿ, ಚಂಡಿಕೇಶ್ವರ ಸೇರಿದಂತೆ ಹಲವಾರು ವಿಗ್ರಹಗಳನ್ನು ಕೇವಲ ಮೂರು ತಿಂಗಳ ಅವಧಿಯಲ್ಲಿ ಪೂರೈಸಿಕೊಟ್ಟು ಎಲ್ಲರ ಮೆಚ್ಚುಗೆಗೆ ಪಾತ್ರರಾದರು. ಪ್ರತಿಷ್ಠಾಪನೆಯ ಸಂದರ್ಭದಲ್ಲಿ ಇವರಿಗೆ 'ಶಿಲ್ಪಕಲಾರತ್ನ' ಎಂಬ ಬಿರುದನ್ನು ನೀಡಿ ಚಿನ್ನದ ಪದಕದೊಂದಿಗೆ ಗೌರವಿಸಲ್ಪಟ್ಟರು. ಇದು ಬಸವಣ್ಣನವರ ಜೀವನದ ಮೊದಲ ಅವಿಸ್ಮರಣೀಯ ದಿನ. ಅಂದು ತಮ್ಮ ಅನಿಸಿಕೆಯನ್ನು ಸಭೆಯಲ್ಲಿ ವ್ಯಕ್ತಪಡಿಸುತ್ತಾ ಈ ಬಿರುದು ಗೌರವ ಸಲ್ಲಬೇಕಾದುದು ನನ್ನ ಗುರುಗಳಾದ ಶಿಲ್ಪಿ ಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳಿಗೆ. ಕಗ್ಗಲ್ಲಿನಂತಹ ನನ್ನಲ್ಲಿನ ಗುಣಗಳನ್ನು ತಿದ್ದಿ ತೀಡಿ ಶಿಲ್ಪಿಯನ್ನಾಗಿಸಿದರು ಎನ್ನುವಲ್ಲಿ ಅವರ ಹೃದಯ ತುಂಬಿ ಬಂದು ಕಣ್ಣಾಲಿಗಳು ಹನಿಗೂಡಿದವು. ಅದನ್ನು ಗಮನಿಸಿದ ವೇದಿಕೆ ಅಧ್ಯಕ್ಷರು ಗುರು ಶಿಷ್ಯ ಸಂಬಂಧ ಅಂದರೇ ಹೀಗಿರಬೇಕು. ಮುಂದಿನ ತರುಣ ಪೀಳಿಗೆ ಇದನ್ನರಿತು ಹೆಜ್ಜೆ ಇಡಬೇಕೆಂದು ಅಧ್ಯಕ್ಷೀಯ ಭಾಷಣದಲ್ಲಿ ತಿಳಿಸಿದ್ದುದನ್ನು ಬಸವಣ್ಣನವರ ಕುಟುಂಬ ಈಗಲೂ ನೆನಸಿಕೊಳ್ಳುತ್ತದೆ.

ಇದಾದ ಮೂರ್‍ನಾಲ್ಕು ತಿಂಗಳ ಒಳಗೆ ಮತ್ತೊಂದು ಅವಕಾಶ ದೊರಕುತ್ತದೆ. ಅಂದಿನ ಪ್ರಧಾನಿ ಪಂಡಿತ ಜವಹರ್‌ಲಾಲ್ ನೆಹರೂರವರು ಬೆಂಗಳೂರಿಗೆ ಕಾಂಗ್ರೆಸ್ ಸಮಾವೇಶಕ್ಕಾಗಿ ಆಗಮಿಸಿದ್ದ ಸಂದರ್ಭದಲ್ಲಿ ರಾಜಕೀಯ ಮುತ್ಸದ್ದಿ ಕೆಂಗಲ್ ಹನುಮಂತಯ್ಯನವರ ಆಣತಿಯಂತೆ "ಮುಕುರ ಮುಗ್ಧೆ' ಎಂಬ ಶಿಲಾಶಿಲ್ಪವನ್ನು ಲಾಲ್‌ಬಾಗಿನ ಗಾಜಿನ ಮನೆಯಲ್ಲಿ ನೆಹರೂರವರಿಗೆ ನೀಡಿದರು (೧೯೫೧). ಬೇಲೂರಿನ ಮದನಿಕೆಯರ ಮೈಮಾಟ ಹೊಂದಿದ್ದ ಆ ಶಿಲ್ಪವನ್ನು ನೋಡಿ ಬೆನ್ನು ತಟ್ಟಿ ಶ್ಲಾಘಿಸಿದರು. ಮರುದಿನದ ಪತ್ರಿಗಳೆಲ್ಲದರಲ್ಲಿ ನೆಹರೂರವರಿಂದ ಬೆನ್ನುತಟ್ಟಿಸಿಕೊಂಡ ಶಿಲ್ಪಿ ಎಂಬ ಶೀರ್ಷಿಕೆಯೊಡನೆ ಪ್ರಕಟವಾಯಿತು. ಇದು ಬಸವಣ್ಣನವರ ಶಿಲ್ಪಕಲಾ ಅಭಿವೃದ್ಧಿಗೆ ಪೂರ್ಣ ಸಹಕಾರಿಯಾಯಿತು. ಭವಿಷ್ಯ ಉಜ್ವಲವಾಗಲು ಆರಂಭವಾಯಿತು.

ಕಲಾವಿದ ಅಥವಾ ಶಿಲ್ಪಿಯ ವ್ಯಕ್ತಿತ್ವ ದರ್ಶನವಾಗುವುದು ಆತನು ಪರಾವಲಂಬಿತನದಿಂದ ದೂರ ಸಾಗಿ ಸ್ವತಂತ್ರವಾಗಿ ಕೆಲಸಮಾಡಿ ತೋರಿಸಿದಾಗ, ಅದನ್ನು ಇತರರು ಮೆಚ್ಚಿ ಮೆಚ್ಚುಗೆಯ ಮುದ್ರೆಯನ್ನೊತ್ತಿದಾಗ ಮಾತ್ರ. ಇಂತಹ ಸನ್ನಿವೇಶ ಸಂದರ್ಭಗಳು ಬಸವಣ್ಣನವರಿಗೆ ಒಂದಾದ ಮೇಲೆ ಒಂದರಂತೆ ಒದಗಿ ಬಂದಿತು. ಸ್ವಾಮಿಗಳು ಒಪ್ಪಿಕೊಂಡು ಮಾಡುತ್ತಿದ್ದ ಅರಮನೆಯೊಳಗಿನ ಭುವನೇಶ್ವರಿ ದೇವಾಲಯದಲ್ಲಿನ ಕಲ್ಕೆತ್ತನೆ ಕೆಲಸಗಳು ಪೂರ್ಣಗೊಂಡು ಉದ್ಘಾಟನೆಯಾಗಿತ್ತು (೧೯೫೧). ಶ್ರೀ ಜಯಚಾಮರಾಜ ಒಡೆಯರ್‌ರವರು ಮತ್ತೊಂದು ದೇವಾಲಯ ಗಾಯತ್ರಿ ದೇವಸ್ಥಾನ ಕಟ್ಟಿಸುವ ಯೋಚನೆ ಮಾಡಿದರು.



೧೯೫೧ರಲ್ಲಿ ಭಾರತದ ಪ್ರಥಮ ಪ್ರಧಾನಿ ಜವಹರ್‌ಲಾಲ್ ನೆಹರುರವರೊಂದಿಗೆ ಶಿಲ್ಪಿ ಬಿ. ಬಸವಣ್ಣ ಅವರು

ಇದಕ್ಕೆ ಮುಖ್ಯಕಾರಣ ಅರಮನೆಯ ಕೋಟೆ ಒಳಾಂಗಣದಲ್ಲಿ ಒಂದೆಡೆ ತ್ರಿಣೇಶ್ವರ ದೇವಸ್ಥಾನವಿದ್ದು ಅದೇ ಸಮತಟ್ಟಿನಲ್ಲಿ ಮತ್ತೊಂದು ದೇವಾಲಯವಾದರೇ ಸಮತೋಲನವಾಗುತ್ತಿತ್ತು (Balance) ಎಂಬುದು ಒಂದು ಅಂಶವಾದರೆ ಅವರ ಪುತ್ರಿಯ ನೆನಹು ಸಹ ಒಂದೆಡೆ ಕೆಲಸಕ್ಕೆ ಪುಷ್ಟಿ ನೀಡಿತ್ತು ಎಂಬುದು ಅಲ್ಲಿಯ ಅರ್ಚಕರ ಅಂಬೋಣ. ಇಂತಹದೇ ಸಮತೋಲನ ದೃಷ್ಟಿಯಿಂದ ಶ್ವೇತವರಾಹಸ್ವಾಮಿ ದೇವಸ್ಥಾನ ಮೊದಲೇ ಇದ್ದುದಾದುದರಿಂದ ಭುವನೇಶ್ವರಿ ದೇವಸ್ಥಾನವು ಸಹ ಸಮತೋಲನಕ್ಕಾಗಿ ವರಾಹಸ್ವಾಮಿ ದೇವಸ್ಥಾನದ ಹೆಬ್ಬಾಗಿಲಿನ ಗೋಪುರದಂತೆಯೇ ನಿರ್ಮಿಸಿರುವುದನ್ನು ಕಾಣಬಹುದಾಗಿದೆ. ಇವುಗಳಲ್ಲದೆ ಪ್ರಸನ್ನ ಕೃಷ್ಣಸ್ವಾಮಿ. ಕಿಲ್ಲೆ ವೆಂಕಟರಮಣಸ್ವಾಮಿ, ಲಕ್ಷ್ಮೀರಮಣಸ್ವಾಮಿ ದೇವಾಲಯಗಳು ಜಯಚಾಮರಾಜ ಒಡೆಯರ ಆಳ್ವಿಕೆಗಿಂತ ಮೊದಲೇ ನಿರ್ಮಾಣವಾಗಿದ್ದು ಒಂದೊಂದೂ ತನ್ನದೇ ಆದ ಐತಿಹ್ಯವನ್ನೊಂದಿದವುಗಳಾಗಿರುತ್ತದೆ.

ಗಾಯತ್ರಿ ದೇವಸ್ಥಾನಕ್ಕೆ ಅಗತ್ಯವಾದ ಎಲ್ಲಾ ವಿಗ್ರಹಗಳನ್ನು ಮಾಡುವ ಹೊಣೆಗಾರಿಕೆಯನ್ನು ಬಸವಣ್ಣನವರು ಸ್ಪರ್ಧಾತ್ಮಕ ಮನೋಭಾವನೆಯಿಂದ (challange) ಸ್ವೀಕರಿಸಿದರು. ಅಗ್ರದೇವತೆಯಾದ ಗಾಯತ್ರಿಯ ಪೌರಾಣಿಕ ಹಿನ್ನೆಲೆಯು ವೈವಿಧ್ಯಮಯವಾಗಿದೆ. ಬೆಳಿಗ್ಗೆ ಗಾಯತ್ರಿ ರೂಪದಲ್ಲಿ, ಮಧ್ಯಾಹ್ನ ಸಾವಿತ್ರಿ ರೂಪದಲ್ಲಿ, ಸಂಜೆ ಸರಸ್ವತಿ ರೂಪದಲ್ಲಿ ಇರುತ್ತದೆಂದು ತಿಳಿಸುವ ಸಂಸ್ಕೃತೋಕ್ತಿಗಳು ಹೀಗಿವೆ:

**ದೇವೀಂ ಪೂರ್ವಾಹ್ನ ಸಂಧ್ಯಾಯಾಂ ಗಾಯತ್ರೀಂ ವಹ್ನಿ ರೂಪಿಣೀಮ್**
ಗಾಯತ್ರಿಯು ಪ್ರಾತಃಕಾಲದಲ್ಲಿ ಅಗ್ನಿಯಂತೆ ಕೆಂಪಾಗಿರುತ್ತಾಳೆ.
**ದೇವೀಂ ಮಧ್ಯಾನ್ಹ ಸಂಧ್ಯಾಯಾಂ ಸಾವಿತ್ರೀಂ ರುದ್ರರೂಪಿಣಮ್**
ಮಧ್ಯಾನ್ಹದ ಸಮಯದಲ್ಲಿ ಸಾವಿತ್ರಿ ಎಂದು ವ್ಯವಹರಿಸುವ ಈ ದೇವಿಯು ರುದ್ರರೂಪದೊಂದಿಗೆ ಯುವಾವಸ್ಥೆಯಲ್ಲಿರುತ್ತಾಳೆ.
**ಸರಸ್ವತೀಂ ತು ಸಾಯಾಹ್ನೇ ಸಂಧ್ಯಾಯಾಂ ವಿಷ್ಣುರೂಪಿಣಮ್**
ಸಾಯಂಕಾಲದ ಸಮಯದಲ್ಲಿ ಈ ದೇವಿ ವಿಷ್ಣುರೂಪ ಪಡೆದಿರುತ್ತಾಳೆ. (*ಮಾರ್ಕಂಡೇಯ ಪುರಾಣದಲ್ಲಿರುವುದನ್ನು ಜಿ. ಜ್ಞಾನಾನಂದ ಅವರು ರೂಪಲಕ್ಷಣ ಸಂಗ್ರಹದಲ್ಲಿ ಉಲ್ಲೇಖಿಸಿದ್ದಾರೆ.*) (ಪು. ೩೩೫–೩೯)

ಈ ಮೂರು ರೂಪಗಳಿಗೆ ಪ್ರತ್ಯೇಕ ವಿಗ್ರಹ ಮಾಡಿದ್ದು ಪ್ರಧಾನ ದೇವತೆ ಗಾಯತ್ರಿಯು ಐದು ಮುಖಗಳನ್ನು, ಹತ್ತು ಕೈಗಳನ್ನು ಹೊಂದಿರುವ ಸುಂದರ ವಿಗ್ರಹವಾಗಿದೆ. ಬಲ ಕೈಗಳಲ್ಲಿ ಮೇಲಿಂದ ಕ್ರಮವಾಗಿ ಕಮಲ, ಚಕ್ರ, ಪಾಶ, ಅಂಕುಶ, ಅಭಯ ಹಸ್ತವಾದರೇ ಎಡಕೈಗಳಲ್ಲಿ ಮೇಲಿಂದ ಕ್ರಮವಾಗಿ ಕಮಲ, ಶಂಖ, ಕಪಾಲ, ಶಕ್ತ್ಯಾಯುಧ, ವರದ ಹಸ್ತಗಳನ್ನು ಹೊಂದಿದೆ. ಪದ್ಮ ಪೀಠದ ಮೇಲೆ ಆಸೀನಳಾಗಿರುವ ಗಾಯತ್ರಿದೇವಿಯ ಹಿಂಬದಿಯ ಪ್ರಭಾವಳಿ ಸಹಜವಾದ ಹೂ ಬಳ್ಳಿಗಳಾಗದೇ ಹೂವಿನ ದಳಗಳ ಮಧ್ಯದಲ್ಲಿ ಗಾಯತ್ರಿ ಮಂತ್ರವನ್ನು ಕೆತ್ತಿರುವುದು ಇದರ ವಿಶೇಷ.

ಸಾವಿತ್ರಿಯು ಏಕ ಶಿರಸ್ಸು, ನಾಲ್ಕು ಕೈಗಳನ್ನು ಹೊಂದಿರುವ ದೇವತೆ. ಬಲಕೈಗಳಲ್ಲಿ ತ್ರಿಶೂಲ ಮತ್ತು ಜಪಸರಗಳನ್ನು ಹೊಂದಿದ್ದರೆ ಎಡಕೈಗಳಲ್ಲಿ ಅಗ್ನಿ ಮತ್ತು ಡಮರುಗದ ಕೆತ್ತನೆ ಮಾಡಿದ್ದಾರೆ. ವೃಷಭವಾಹನಾರೂಢೆಯಾಗಿರುವ ಸಾವಿತ್ರಿದೇವತೆಯ ಕೆತ್ತನೆ ಆಕರ್ಷಕವಾಗಿದೆ.

ಸರಸ್ವತಿ ಶಿಲ್ಪವಂತೂ ಇವೆರಡಕ್ಕಿಂತ ಭಿನ್ನವಾಗಿದೆ. ಸರಸ್ವತಿ ಎಂದೊಡನೆ ವೀಣಾಪಾಣಿ, ವಿದ್ಯಾಧಿದೇವತೆ, ಸಕಲ ಸದ್ಗುಣದಾತೆ **'ವಿದ್ಯಾವಿಹೀನಸ್ಯ ಪಶುಃ'** ವಿದ್ಯೆ ಇಲ್ಲದವನನ್ನು ದನಕ್ಕೆ ಸಮಾನ ಇತ್ಯಾದಿ ಗುಣವಿಶೇಷಣಗಳಿಂದ ಸರಸ್ವತಿಯನ್ನು ಸ್ಮರಿಸುವುದು ಸಹಜ ಕ್ರಿಯೆ. ವೀಣೆ ನುಡಿಸುತ್ತಿರುವ ಮತ್ತು

ಶಾಸ್ತ್ರದ ಕಟ್ಟುಗಳನ್ನು ಕೈಯಲ್ಲಿ ಹಿಡಿದಿರುವ ಸರಸ್ವತಿಯ ಚಿತ್ರವನ್ನಾಗಲೀ, ಶಿಲ್ಪವನ್ನಾಗಲಿ ಎಲ್ಲೆಡೆ ಕಾಣಬಹುದಾಗಿದೆ.

ಇಲ್ಲಿರುವ ಸರಸ್ವತಿ ವಿಶೇಷ ಲಕ್ಷಣಗಳಿಂದ ಕೂಡಿದೆ. ಒಂದೇ ಮುಖ, ನಾಲ್ಕು ಕೈಗಳನ್ನು ಹೊಂದಿದ್ದು ನಾಲ್ಕು ಭುಜಗಳನ್ನು ನಾಲ್ಕು ವೇದಗಳಿಗೂ ಹೋಲಿಕೆ ಮಾಡಿರುವುದು ಪುರಾಣಗಳಲ್ಲಿ ಕಂಡುಬರುತ್ತದೆಯಾದರೂ ಶಿಲ್ಪದಲ್ಲಿ ಬಲಹಸ್ತಗಳೆರಡರಲ್ಲಿ ಚಕ್ರ ಮತ್ತು ಪದ್ಮಕಮಲವಿದ್ದರೆ ಎಡ ಹಸ್ತಗಳಲ್ಲಿ ಶಂಖ ಮತ್ತು ಗದೆಯುಳ್ಳಂತೆ ಕೆತ್ತನೆ ಮಾಡಲಾಗಿದೆ. ಸಂಜೆಯ ಸಮಯದಲ್ಲಿ ವಿಷ್ಣುರೂಪ ಪಡೆದಿರುತ್ತಾಳೆಂದು ವೈದಿಕ ನೆಲೆಯಲ್ಲಿಯೇ ಗುರುತಿಸಿರುವುದರಿಂದ ವಿಷ್ಣುವಿನ ವಾಹನವಾದ ಗರುಡನೇ ಸರಸ್ವತಿಯನ್ನು ಹೊತ್ತುಕೊಂಡಂತಿದೆ. ಗರುಡನ ವಿಶಾಲವಾದ ಭುಜದ ಮೇಲೆ ಆಸೀನವಾಗಿರುವ ಸರಸ್ವತಿಯ ಕಾಲುಗಳೆರಡು ಗರುಡನ ವಕ್ಷಸ್ಥಳದ ಮೇಲೆ ಆಶ್ರಯ ಪಡೆದಂತೆ ಇದ್ದು ಇಳಿಬಿದ್ದ ಪಾದಗಳೆರಡನ್ನು ತನ್ನ ಹಸ್ತಗಳಿಂದ ಹಿಡಿದಿರುವುದನ್ನು ಕಾಣಬಹುದಾಗಿದೆ. ಗರುಡನ ರೆಕ್ಕೆಯು ಹಿಂದಿನ ಪ್ರಭಾವಳಿಗೆ ಹೊಂದಿಕೊಂಡಂತಿದ್ದು ಗರಿಬಿಚ್ಚಿಹಾರುವ ರೀತಿಯಲ್ಲಿ ಕೆತ್ತಲಾಗಿದೆ. ಪ್ರಭಾವಳಿಯಲ್ಲಿನ ಅಲಂಕರಣ ಕಲೆಯು ಸಹ ಸೂರ್ಯನ ಜ್ವಾಲೆಗಳಂತೆ ರೂಪಿಸಿದ್ದು ದೇವಿಯ ತೀಕ್ಷ್ಣತೆಯ ದ್ಯೋತಕವಾಗಿದೆ.

ಈ ಮೂರು ದೇವತೆಗಳ ಪೀಠದಡಿಯಲ್ಲಿ ಲಿಂಗದ ಪಾಣಿಪೀಠ ಅಥವಾ ವಿಷ್ಣುಭಾಗವೆಂದು ಕರೆಯಲ್ಪಡುವ ಜಲಹರಿಯನ್ನು ಮಾಡಲಾಗಿದ್ದು ನೆಲಮಟ್ಟದಿಂದ ಸುಮಾರು ನಾಲ್ಕೈದು ಅಡಿ ಎತ್ತರ ಸಾವಿತ್ರಿ ಮತ್ತು ಸರಸ್ವತಿ ವಿಗ್ರಹಗಳಿದ್ದರೆ, ಕೇಂದ್ರ ದೇವತೆಯಾದ ಗಾಯತ್ರಿಯ ಎತ್ತರವು ಇವೆರಡಕ್ಕಿಂತ ಕೊಂಚ ಅಧಿಕವಾಗಿದ್ದು ಕೇಯೂರ, ಕಟಕ, ಕಂಕಣ, ಮುತ್ತಿನ ಸ್ಕಂದ ಮಾಲೆಗಳಿಂದ ಅಲಂಕೃತವಾಗಿರುವಂತೆ ಕುಶರಿ ಕೆತ್ತನೆ ಮಾಡಲಾಗಿದೆ.

ಗಾಯತ್ರಿದೇವಿಯ ಗರ್ಭಗುಡಿಯ ಇಕ್ಕೆಲಗಳಲ್ಲಿರುವ ದ್ವಾರಪಾಲಿಕೆಯರು ನಾಲ್ಕು ಕೈಗಳನ್ನು ಹೊಂದಿದ್ದು ಪಾಶ, ಅಂಕುಶ, ಅಭಯ ಮತ್ತು ಗದೆಯನ್ನು ಹಿಡಿದಿರುವಂತಿದ್ದರೆ, ಸಾವಿತ್ರಿಯ ದ್ವಾರಪಾಲಿಕೆಯರು ತ್ರಿಶೂಲ, ಡಮರುಗ, ಗದೆ ಮತ್ತು ಅಭಯಹಸ್ತವುಳ್ಳವರಾಗಿದ್ದಾರೆ. ಸರಸ್ವತಿಯ ದ್ವಾರಪಾಲಿಕೆಯರು ಶಂಖ, ಚಕ್ರ, ಗದೆ ಮತ್ತು ಅಭಯಹಸ್ತದಿಂದ ಕಂಗೊಳಿಸುತ್ತಾರೆ.

ಗರ್ಭಗುಡಿಗೆ ಅಂಟಿಕೊಂಡಂತಿರುವ ಸಭಾಮಂಟಪದಲ್ಲಿನ ಕಲ್ಕಂಬಗಳಲ್ಲಿ ಯಾವುದೇ ಕೆತ್ತನೆಗಳಿಲ್ಲದೇ ಸಾಧಾರಣ ನೆಲೆಯಲ್ಲಿದ್ದರೂ ಗೋಡೆಗಳಲ್ಲಿನ ಮಂಟಪಗಳು ಅದರೊಳಗಿನ ಮೂರ್ತಿಗಳು ಜನರ ಗಮನ ಸೆಳೆಯುತ್ತವೆ. ಸೂರ್ಯ ಮತ್ತು ಮಹಾವಿಷ್ಣುವನ್ನೊಳಗೊಂಡ ಮಂಟಪವು ಗರ್ಭಗುಡಿಯ ಬಲಭಾಗಕ್ಕೆ ಇದ್ದರೆ, ಶಿವ ಮತ್ತು ಗಣಪತಿ ವಿಗ್ರಹಗಳನ್ನೊಳಗೊಂಡ ಮಂಟಪ ಎಡಕ್ಕೆ ಇದೆ. ಇದಕ್ಕೆ ಗಾಯತ್ರಿ ಪಂಚಾಯಿತನವೆನ್ನುತ್ತಾರೆ.

ಸೂರ್ಯನ ಎರಡು ಕೈಗಳಲ್ಲೂ ಕಮಲದ ಪುಷ್ಪವಿದ್ದು ಎರಡು ಕಾಲುಗಳನ್ನು ಮಡಚಿ ಯೋಗಮುದ್ರೆಯಲ್ಲಿ ಕುಳಿತಂತೆ ರೂಪಿಸಲಾಗಿದೆ. ಹಿಂಬದಿಯಲ್ಲಿನ ಪ್ರಭಾವಳಿ ಸಹ ಜ್ವಾಲೆಯ ನಾಲಿಗೆಯಂತೆ ಕೆತ್ತನೆ ಮಾಡಲಾಗಿದೆ.

ಮಹಾವಿಷ್ಣು ಮೂರ್ತಿಯು ನಾಲ್ಕು ಕೈಗಳನ್ನು ಹೊಂದಿದ್ದು ಬಲಗಡೆ ಚಕ್ರ ಮತ್ತು ಅಭಯ ಮುದ್ರೆಗಳಿದ್ದರೆ, ಎಡಕ್ಕೆ ಶಂಖ ಮತ್ತು ವರದ ಮುದ್ರೆಗಳನ್ನು ಹೊಂದಿದ್ದು ಧರಿಸಿದ ಚೆನ್ನವೀರವು ಕೊರಳಿಂದ ಮಡಚಿದ ಮಂಡಿಯವರೆಗೂ ಪಸರಿಸಿ ವಿಗ್ರಹದ ಒಟ್ಟಂದಕ್ಕೆ ಶೋಭೆ ತರುವಂತಾಗಿದೆ.



ಸಾವಿತ್ರಿ – ಅರಮನೆ ಗಾಯತ್ರಿ ದೇವಸ್ಥಾನ



ಸರಸ್ವತಿ – ಅರಮನೆ ಗಾಯತ್ರಿ ದೇವಸ್ಥಾನ

ಜಟಾಮಕುಟಧಾರಿ ಶಿವನ ವಿಗ್ರಹದಲ್ಲಿ ನಾಲ್ಕು ಕೈಗಳಿದ್ದು ಬಲಕ್ಕೆ ತ್ರಿಶೂಲ ಮತ್ತು ಅಭಯ ಮುದ್ರೆಗಳಿದ್ದರೆ ಎಡಕೈಗಳಲ್ಲಿ ಡಮರುಗ ಹಾಗೂ ವರದ ಮುದ್ರೆಯನ್ನೊಂದಿದೆ. ಕತ್ತಿನಲ್ಲಿ ರುದ್ರಾಕ್ಷಿ ಸರ ಮತ್ತು ಹಾವನ್ನೇ ಮಾಲೆಯನ್ನಾಗಿ ಧರಿಸಿರುವಿಕೆ ಹಾಗೂ ಧ್ಯಾನರೂಪದಲ್ಲಿ ಸಮಚಿತ್ತನಾಗಿರುವ ಮುಖಮುದ್ರೆಯನ್ನೊಂದಿದೆ.

ಗಣಪತಿಯಂತೂ ಪಾಶ, ಅಂಕುಶ, ಮೋದಕ, ಕಡಬುಗಳನ್ನು ತನ್ನ ನಾಲ್ಕು ಹಸ್ತಗಳಿಂದ ಹಿಡಿದಂತಿದ್ದು ಸರ್ವಾಭರಣಭೂಷಿತನಾದಂತೆ ಕೆತ್ತಲಾಗಿದೆ.

ಈ ನಾಲ್ಕು ದೇವತಾ ಮೂರ್ತಿಗಳನ್ನು ಗೋಡೆಗಳಲ್ಲಿನ ಗೂಡುಗಳಲ್ಲಿ ಪ್ರತಿಷ್ಠಾಪಿಸಿದ್ದರೆ ಅವುಗಳಿಗೆ ಹೊಂದಿಕೊಂಡಂತೆ ಮಾಡಿರುವ ಮಂಟಪಗಳ ಅಗ್ರಭಾಗವು ಕಳಸವನ್ನೊತ್ತ ಮಕರ ವ್ಯಾಳಿಗಳ ಸ್ವರೂಪದಲ್ಲಿವೆ. ಇದೇ ಮಾದರಿಯ (Pattern) ಮಂಟಪಗಳನ್ನು ಯತೇಚ್ಛವಾಗಿ ಮೈಸೂರಿನ ರಾಮಾನುಜ ರಸ್ತೆಯಲ್ಲಿನ ಕಾಮಕಾಮೇಶ್ವರಿ ದೇವಸ್ಥಾನದಲ್ಲಿ ಸ್ವಾಮಿಗಳ ನೇತೃತ್ವದಲ್ಲಿ ಬಸವಣ್ಣನವರನ್ನೊಳಗೊಂಡಂತೆ ಸಿ. ಪರಮೇಶ್ವರಾಚಾರ್, ವಿಷಕಂಠಚಾರ್, ಚೆನ್ನವೀರಯ್ಯ, ಶಂಕರಯ್ಯ

ಮತ್ತು ಪ್ರಮುಖ ರೂವಾರಿ ನಾಗೇಂದ್ರ ಸ್ತಪತಿಗಳಾದಿಯಾಗಿ ಕೆತ್ತಿರುವ ಹಲವಾರು ವಿಗ್ರಹಗಳು ಇದೇ ಶೈಲಿಯಲ್ಲಿರುವುದನ್ನು ಇಂದಿಗೂ ಕಾಣಬಹುದಾಗಿದೆ.

ಪಶ್ಚಿಮಾಭಿಮುಖವಾಗಿರುವ ಈ ಗಾಯತ್ರಿ ದೇವಸ್ಥಾನದ ಪ್ರವೇಶ ಮಂಟಪದ್ವಾರದಲ್ಲಿ ಸುಮಾರು ಐದೂವರೆ ಅಡಿ ಎತ್ತರದ ಎರಡು ದ್ವಾರಪಾಲಿಕೆಯರಿದ್ದು ಅವುಗಳು ಸಹ ಪಾಶ, ಅಂಕುಶ, ಗದೆಗಳನ್ನು ಹಿಡಿದು ಒಂದು ಹಸ್ತ ಮಾತ್ರ ಅಭಯ ಮುದ್ರೆಯನ್ನೊಂದಿದೆ. ಇದರ ಪ್ರಭಾವಳಿ ಇನ್ನಿತರ ದ್ವಾರಪಾಲಿಕೆಯರ ಪ್ರಭಾವಳಿಯಂತಿಲ್ಲದೇ ಕಿರೀಟದ ಹಿಂಬದಿಯ ಭಾಗವನ್ನು ಪೂರ್ಣ ತೆಗೆಯದೇ ಬಿಡಲಾಗಿದೆ. ಇನ್ನುಳಿದಂತೆ ದ್ವಾರಪಾಲಿಕೆಯರೆಲ್ಲರ ಶೈಲಿ ಒಂದೇ ತೆರನಾಗಿದ್ದು ಏಕತಾನತೆ ಹೊಂದಿದೆ.

ಪ್ರವೇಶ ಮಂಟಪದ ಮೇಲೆ ಧ್ವಜಸ್ತಂಭಕ್ಕೆ ಹತ್ತಿರವಾಗಿ ಪಶ್ಚಿಮಕ್ಕೆ ಗಾಯತ್ರಿ, ಉತ್ತರಕ್ಕೆ ಸಾವಿತ್ರಿ, ದಕ್ಷಿಣಕ್ಕೆ ಸರಸ್ವತಿಯ ವಿಗ್ರಹಗಳಿದ್ದು ಸುಮಾರು ಒಂದೂವರೆ ಅಡಿ ಎತ್ತರಕ್ಕೆ ಗರ್ಭಗುಡಿಯಲ್ಲಿರುವ ರೀತಿಯಲ್ಲಿಯೇ ಮಾಡಲಾಗಿದೆ. ಇನ್ನು ಗರ್ಭಗುಡಿಯ ಮೇಲಿನ ಮೂರು ಗೋಪುರಗಳಲ್ಲಿಯೂ ಆಯಾಯ ದೇವಿಯ ಪುರಾಣ ವರ್ಣನೆಗೆ ಅನುಗುಣವಾಗಿ ಕೆತ್ತಿರುವ ವಿಗ್ರಹಗಳಿವೆ. ಶಿಖರದವರೆಗೆ ಒಂದೊಂದು ದಿಕ್ಕಿಗೂ ನಾಲ್ಕು ವಿಗ್ರಹಗಳಂತೆ ಒಂದು ಗೋಪುರಕ್ಕೆ ಹದಿನಾರು ಮೂರ್ತಿಗಳು ಒಟ್ಟಾರೆ ಮೂರು ಗೋಪುರದಿಂದ ನಲವತ್ತೆಂಟು ಮೂರ್ತಿಗಳನ್ನು ಕೆತ್ತನೆ ಮಾಡಿ ಅವುಗಳಿಗಾಗಿ ನಿರ್ಮಿಸಿರುವ ಕಿರುಗೂಡಿನಲ್ಲಿಡಲಾಗಿದೆ. ಉಳಿದಂತೆ ಗೋಪುರದ ಕೆಲಸವು ಗಾರೆ, ಸುಣ್ಣ, ಸಿಮೆಂಟ್‌ಗಳಿಂದ ಮಾಡಲಾಗಿದೆ. ಪ್ರವೇಶ ಮಂಟಪಕ್ಕೆ ಹತ್ತುವ ಮೆಟ್ಟಿಲು (Steps)ಗಳ ಇಕ್ಕೆಲಗಳಲ್ಲಿ ಕಗ್ಗಲ್ಲಿನಲ್ಲಿ ಕೆತ್ತಿರುವ ಸುಂದರವಾದ ಮಕರವ್ಯಾಳಿಯ ರೂಪವೂ ಸೇರಿದಂತೆ ಸರಿ ಸುಮಾರು ಎಪ್ಪತ್ತು ಕಲಾಕೃತಿಗಳ ಕೆತ್ತನೆ ಕೆಲಸ ಬಸವಣ್ಣನವರ ನೇತೃತ್ವದಲ್ಲಿ ಒಂದು ವರ್ಷದೊಳಗಾಗಿ ಪೂರೈಸಿದೆ ಎಂಬುದು ಅವರಲ್ಲಿನ ಕತೃತ್ವಶಕ್ತಿಯ ದ್ಯೋತಕವಾಗಿದೆ. ಬೆಳಕಿಗೆ ಬಾರದ ಬಸಪ್ಪಾಚಾರ್, ಪುಟ್ಟಾಚಾರ್, ಲಿಂಗಾಚಾರ್, ತಿಮ್ಮಾಚಾರ್, ಸಿದ್ದಪ್ಪ ಇನ್ನೂ ಅನೇಕರ ಶ್ರಮವು ಅಡಕಗೊಂಡಿದೆಯೆಂಬುದು ಗಮನಾರ್ಹ.

ಈ ಎಲ್ಲಾ ಕೆಲಸಗಳನ್ನು ಖುದ್ದಾಗಿ ವೀಕ್ಷಿಸಿದ ಶ್ರೀ ಜಯಚಾಮರಾಜ ಒಡೆಯರ್‌ರವರು ಸಂತೃಪ್ತಿಗೊಂಡು ಮೊದಲನೇ ದರ್ಜೆ ಖಿಲ್ಲತ್ತು ನೀಡಿದರು. ನೇತ್ರೋನ್ಮೀಲನ ಸಂದರ್ಭದಲ್ಲಿ ಚಿನ್ನದ ಉಳಿ (Gold chisel), ಬೆಳ್ಳಿ ಸುತ್ತಿಗೆ (Silver hammer), ಬಂಗಾರದ ಸರ ನೀಡಿ ೫ ಜೊತೆ ಶಾಲನ್ನು ಕೊಟ್ಟು ಸನ್ಮಾನಿಸಿದರು. ಕೇಂದ್ರ ಸರ್ಕಾರ ರಾಷ್ಟ್ರಪತಿಗಳಿಂದ ಕೊಡ ಮಾಡಲ್ಪಡುವ ಪ್ರಶಸ್ತಿಯಷ್ಟೇ ಗೌರವಯುತವಾದ ಈ ಸತ್ಕಾರ ಬಸವಣ್ಣನವರ ಜೀವನದಲ್ಲಿ ಮರೆಯಲಾಗದ ಅನುಭವ ತರುತ್ತದೆ.

ಇಂತಹ ಸಂದರ್ಭದಲ್ಲಿ ಒಂದು ಮಾತನ್ನು ಪ್ರಸ್ತಾಪಿಸುವುದು ಅಗತ್ಯವೆನಿಸುತ್ತದೆ. ನೇತ್ರೋನ್ಮಿಲನವು ವಿಗ್ರಹವು ರೂಪುಗೊಂಡ ನಂತರ ಪ್ರತಿಷ್ಠಾಪಿಸುವ ಕೊನೆಯ ಹಂತದಲ್ಲಿ ಮಾಡುವ ವಿಧಾನ ಸಪ್ತಾದಿವಾಸ, ಜಲಾದಿವಾಸ, ಧಾನ್ಯಾದಿವಾಸದ ನಂತರ ಅಷ್ಟದಿಗ್ಬಂಧನದಿಂದ ವಿಗ್ರಹವನ್ನು ಗಟ್ಟಿಗೊಳಿಸಿ ನಂತರ ನೇತ್ರೋನ್ಮೀಲನವಾಗಬೇಕು. ಅಂದರೇ ಆ ದೇವತೆಯ ಕಣ್ಣಿಳ ನೋಟವು ಸಕಲ ಜೀವರಾಶಿಗಳಿಗೂ ಬಾಧಕವಾಗದಂತೆ ದೃಷ್ಟಿಸುವ ರೀತಿ ಕೆತ್ತನೆ ಮಾಡುವುದೆಂದರ್ಥ. ಬಂದ ಭಕ್ತರನ್ನು ದುರುಗುಟ್ಟಿಕೊಂಡು ನೋಡುವಂತಿರಬಾರದು. ಅಧೋಮುಖವಾಗಿ ಮೂಗಿನ ತುದಿ ಕಾಣುವಂತಹ ನೋಟವಿರಬಾರದು. ತೀರಾ ಕಣ್ಮುಚ್ಚಿದಂತೆಯೂ ಇರಬಾರದು ಎಂಬೆಲ್ಲಾ ಶಿಲಾಕೆತ್ತನೆ ರಹಸ್ಯ ವಿಚಾರಗಳಿದ್ದು ಶಿಲ್ಪಿಯೇ ಅವುಗಳ ಸೂಕ್ಷ್ಮ ಸೂಕ್ಷತೆಯನ್ನರಿತು ಕೆತ್ತನೆ ಮಾಡಬೇಕಾಗುತ್ತದೆ. ಆದ್ದರಿಂದ ಆ ಅಂತಿಮ ಸ್ಪರ್ಶಕ್ಕೆ ಶಿಲ್ಪಿಗೆ ಚಿನ್ನದ ಉಳಿ (Gold chisel) ಬೆಳ್ಳಿಯ ಸುತ್ತಿಗೆ (Silver hammer) ಕೊಟ್ಟು ಅದರ ಮೂಲಕ

ದೃಷ್ಟಿ ಬಿಡಿಸುವುದು, ಸಮಾಜ, ದೇಶಗಳ ಮೇಲೆ ಉತ್ತಮವಾಗಿ ಸಮಚಿತ್ತದಿಂದ ಬೀಳುವಂತೆ ಮಾಡುವುದೇ ಆಗಿರುತ್ತದೆ. ಈ ಕ್ರಮ ಎಲ್ಲಾ ವಿಗ್ರಹಗಳಿಗೆ ಅನ್ವಯಿಸುತ್ತದೆ. ಅದರಲ್ಲೂ ಪ್ರದಾನ ದೇವತೆಯಾಗಿ ಪ್ರತಿಷ್ಠಾಪಿಸುವ ಸಂದರ್ಭದಲ್ಲಿ ತೀರಾ ಅವಶ್ಯವೆನಿಸುತ್ತದೆ. ನಂತರ, ಆಗಮಿಕರು, ಪುರೋಹಿತರು ಸೇರಿ ಪ್ರತಿಷ್ಠಾಪನೆ ವಿಧಿ ವಿಧಾನಗಳನ್ನು, ಪ್ರಾಣ ಪ್ರತಿಸ್ಥಾಪನೆಗಳನ್ನು ನಡೆಸುತ್ತಾರೆ. ಇದರಿಂದ ಶಕ್ತಿ–ನೆಮ್ಮದಿಗಳು ಸಿಗುವುದು ಎಂಬ ನಂಬಿಕೆ ಹೀಗೆ ನಮ್ಮ ಸಂಸ್ಕೃತಿಯಲ್ಲಿ ದೇವಾಲಯಗಳ ಪಾತ್ರ ಮಹತ್ವವುಳ್ಳದ್ದು.

ಹಿಂದೆ ರಾಜ ಮಹಾರಾಜರು, ಶ್ರೀಮಂತ ಧನಿಕರು, ಅತ್ಯುತ್ಸಾಹಿ ಕಲಾಪೋಷಕರು ಪ್ರತಿಷ್ಠಾಪಿಸುವಾಗ ಈ ಕ್ರಮ ಅನುಸರಿಸುತ್ತಿದ್ದರು. ವಿಗ್ರಹ ಕಟೆಯುವ ಶಿಲ್ಪಿಗಳು ಸಹ ಸಾಧ್ಯವಾದಷ್ಟು ಸಪ್ತ ವ್ಯಸನಗಳಿಂದ ದೂರವಾಗಿ (ಹೆಂಗಸು, ಜೂಜು, ಬೇಟೆ, ಹೆಂಡ, ಉಗ್ರವಾದ ಬೈಗಳು, ಉಗ್ರಶಿಕ್ಷೆ, ದುಂದು ವೆಚ್ಚ) ಅತ್ಯಂತ ಭಯಭಕ್ತಿಯಿಂದ ದೇವರ ಮೂರ್ತಿ ಇಡುವಲ್ಲಿ ಎಚ್ಚರವಹಿಸುತ್ತಿದ್ದರು.

ಶ್ರೀಮನ್ ಮಹಾರಾಜರಿಂದ ಸನ್ಮಾನಿಸಿಕೊಂಡ ನಂತರದಿಂದ ಬಸವಣ್ಣನವರ ಕೀರ್ತಿ ಇಮ್ಮಡಿ ಮುಮ್ಮಡಿಯಾಗಿ ವರ್ಧಿಸಿತು. ವಿಗ್ರಹ ಕೆತ್ತನೆಗೆ ಬೇಡಿಕೆಗಳು ಹೆಚ್ಚಾದವು. ಮಹಾರಾಜರ ಆಪ್ತ ಕಾರ್ಯದರ್ಶಿಯಾದ ಎ. ಡಿ. ಸಿ. ಮಹಾದೇವಪ್ಪನವರ ನೇತೃತ್ವದಲ್ಲಿದ್ದ ಮೈಸೂರಿನ ಭೈರವೇಶ್ವರ ದೇವಸ್ಥಾನಕ್ಕೆ ಹಾಗೂ ಚಾಮುಂಡಿವನದಲ್ಲಿದ್ದ ದೇವಾಲಯವೊಂದಕ್ಕೆ, ಕೃಷ್ಣರಾಜ ಮಾರ್ಕೆಟ್ ಬಳಿ ಇರುವ ನವಗ್ರಹ ಮಂಟಪಕ್ಕೆ, ರೆಗ್ಯುಲೇಟೆಡ್ ಮಾರ್ಕೆಟ್ ಬಳಿ ಇರುವ ಸತ್ಯನಾರಾಯಣ ದೇವಾಲಯಕ್ಕೆ ಹೀಗೆ ಮೈಸೂರಿನ ತುಂಬೆಲ್ಲಾ ಬಸವಣ್ಣನವರು ಮಾಡಿದ ಶಿಲ್ಪಗಳು ಜನರ ಗಮನ ಸೆಳೆಯುತ್ತಿದ್ದವು.

ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿ ನೂತನವಾಗಿ ನಿರ್ಮಾಣವಾಗುತ್ತಿದ್ದ ವಿಶ್ವೇಶ್ವರಪುರಂನಲ್ಲಿನ ಕನ್ನಿಕಾ ಪರಮೇಶ್ವರಿ ದೇವಾಲಯಕ್ಕೆ ಮೂಲ ದೇವರನ್ನು ಅಮೃತಶಿಲೆಯಿಂದ ಮಾಡುವ ಯೋಗ ಕೂಡಿಬಂತು (೧೯೬೩). ಉಮಾಮಹೇಶ್ವರ, ಲಕ್ಷ್ಮೀನಾರಾಯಣ, ಬೃಂದಾವನ, ನವಗ್ರಹಗಳು, ನಾಗರಗಳು ಇತ್ಯಾದಿ ವಿಗ್ರಹಗಳನ್ನು ಸ್ಥಳೀಯ ಶಿಲ್ಪಿಗಳಿಂದ ಮಾಡಿಸಿದರೇ ಇಡೀ ದೇವಾಲಯದ ಗೋಪುರ ಮಹಾದ್ವಾರದಲ್ಲಿನ ಗಿರಿಜಾಕಲ್ಯಾಣ, ಶ್ರೀನಿವಾಸ ಕಲ್ಯಾಣ ಮತ್ತು ಶ್ರೀ ಕನ್ನಿಕಾಪರಮೇಶ್ವರಿ ದರ್ಬಾರುಗಳಂತಹ ಸಮೂಹ ಶಿಲ್ಪಗಳು ತಮಿಳ್‌ನಾಡಿನ ಶಿಲ್ಪಿಗಳಿಂದ ಮಾಡಿಸಿದ್ದಾರೆ. ಆದರೆ ಮೂಲ ಪೂಜಾ ವಿಗ್ರಹ ಬಸವಣ್ಣನವರಿಂದಲೇ ಮಾಡಿಸಬೇಕೆಂದು ಆರ್ಯ ವೈಶ್ಯ ಮಂಡಲಿ ನಿರ್ಧರಿಸಿದ್ದು ಶಿಲಾಕೆತ್ತನೆಯಲ್ಲಿ ಗಳಿಸಿಕೊಂಡಂತಹ ಪ್ರಖ್ಯಾತಿಗೆ ಸಾಕ್ಷಿಯಾಗಿತ್ತು (ಸಂ. ಕರ್ನಾಟಕ, ೬–೫–೧೯೬೩). ಸುಮಾರು ನಾಲ್ಕು ಅಡಿ ಎತ್ತರವಿರುವ ಕನ್ನಿಕಾಪರಮೇಶ್ವರಿಯು ಚತುರ ಬಾಹುಗಳನ್ನೊಂದಿದ್ದು ಬಲಗಡೆಯ ಮೊದಲ ಹಸ್ತದಲ್ಲಿ ಕಮಲ, ದ್ವಿತೀಯ ಹಸ್ತ ಅಭಯವನ್ನೀಡುವಂತೆಯೂ ಎಡಗಡೆಯ ಮೊದಲ ಹಸ್ತದಲ್ಲಿ ಕಮಲದ ಮೇಲೆ ಗಿಣಿ, ದ್ವಿತೀಯ ಹಸ್ತವು ವರವನ್ನೀಡುವ ದಾತೆಯ ರೀತಿಯಲ್ಲೂ ಕೆತ್ತಲಾಗಿದೆ. ಸ್ಥಾನಿಕ ರೂಪದಲ್ಲಿರುವ ದೇವಿಯ ಕಚ್ಚೆಯುಡಿಗೆಯನ್ನು ನೈಜವಾಗಿ ಕಾಣುವಂತೆ ಕೆತ್ತಿದ್ದಾರೆ. ದೇವಿಯ ಮೈಮೇಲಿನ ಆಭರಣ ಕಿರೀಟದ ಕೆಲಸಗಳಂತೂ ಅಪಾರ ಪರಿಶ್ರಮದಿಂದ ಕೂಡಿದ್ದು ಕಿವಿಯಲ್ಲಿ ಮಕರ ಕುಂಡಲಿಯು ಕೊರಳಲ್ಲಿ ಎದ್ದು ಕಾಣುವಂತೆ ಕೆತ್ತಿರುವ ನವರತ್ನ ಸರವು ಹಾಗೂ ವೈಜಯಂತಿಯ ಮಾಲೆಯ ಕುಶರಿ ಕೆಲಸ ಬೆರಗುಗೊಳಿಸುವಂತಿದೆ. ಪ್ರಭಾವಳಿ ಕೂಡಾ ಸ್ಥಾನಿಕದಿಂದಿರುವ ದೇವಿಗೆ ಪೂರಕವಾಗಿ ಕಮಾನುಗಳಂತೆ ಮಾಡಿ ಅಗ್ರಭಾಗದಲ್ಲಿ ವ್ಯಾಘ್ರವ್ಯಾಳಿಯನ್ನೊಂದಿದೆ. ಶ್ವೇತವರ್ಣದ ಶಿಲೆ ಅಥವಾ ಅಮೃತ ಶಿಲೆಯಲ್ಲಿ ಮಾಡುವ ವಿಗ್ರಹವು ಮಿಕ್ಕೆಲ್ಲಾ ಕಲ್ಲುಗಳಿಗಿಂತ ಉತ್ತಮವೆಂದು ಕಾಶ್ಯಪ ಶಿಲ್ಪ ಶಾಸ್ತ್ರದಲ್ಲಿ ಉಲ್ಲೇಖವಿದೆ.



ವೀಣಾ ಸರಸ್ವತಿ – ಹಾಸನ

**ಶ್ವೇತ ರಕ್ತಾಚ ಪೀತಾ ಚ ವಿಪ್ರಾದೀನಾಂ ಕ್ರಮಾತ್ ಭವೇತ್।**
**ಧರ್ಮಕಾಮಾರ್ಥ ಮೋಕ್ಷಂ ಚ ತದ್ಯೋಗ್ಯ ಸಂತಾನ ಮೇವ ಚ ॥**
**ಪರೇಷಾಮ ಪರಂ ಶ್ರೇಷ್ಠಂ.....**

ಆದರೇ ಶ್ವೇತಕಲ್ಲುಗಳು ಎಲ್ಲೆಡೆ ಲಭ್ಯವಾಗುವುದಿಲ್ಲ. ದೇಶದ ಒಂದೆರಡು ಭಾಗದಲ್ಲಿ ದೊರೆಯುತ್ತವೆಯಾದರೂ ಅದನ್ನು ಸಾಗಿಸುವುದಕ್ಕೆ ಕಲ್ಲಿನ ಬೆಲೆಗಿಂತ ನಾಲ್ಕಾರು ಪಟ್ಟು ಅಧಿಕ ಹಣ ನೀಡಬೇಕಾಗಿದೆ. ಇದಕ್ಕಿಂತ ಮಿಗಿಲಾಗಿ ಅಮೃತಶಿಲೆ ಗಡುಸಾದ ಕಾಠಿಣ್ಯವುಳ್ಳದ್ದಾದುದರಿಂದ ಇತರ ಕಲ್ಲುಗಳಿಂದ ವಿಗ್ರಹಗಳನ್ನು ಕೆತ್ತುವ ಸಮಯಕ್ಕಿಂತ ಹತ್ತಾರು ಪಟ್ಟು ಹೆಚ್ಚಿನ ಸಮಯವನ್ನು ಪಡೆಯುತ್ತದೆಯಾದ್ದರಿಂದ ಸಹಜವಾಗಿ ವಿಗ್ರಹದ ಬೆಲೆಯು ಇತರ ಕಲ್ಲಿನಿಂದ ಮಾಡುವುದಕ್ಕಿಂತ ಅತಿ ಹೆಚ್ಚಿನ ಪ್ರಮಾಣದಲ್ಲೇ ಇರುತ್ತದೆಯಾದ್ದರಿಂದ ಅಮೃತ ಶಿಲೆಯಿಂದ ಮಾಡಿಸುವವರ ಸಂಖ್ಯೆ ಅತಿವಿರಳ. ಪೂರ್ಣಗೊಂಡ ಮೂರ್ತಿಯು ದೂರದಿಂದ ನೋಡುವವರಿಗೆ ಅದರಲ್ಲೂ ವಿದ್ಯುತ್ ಬೆಳಕಿನಲ್ಲಿ



ಗಣೇಶ

ಮುದ್ದೆಯಾಕಾರದಲ್ಲಿ ಕಾಣುವ ಸಂಭವ ಹೆಚ್ಚು. ಅದಕ್ಕಾಗಿಯೇ ನಿತ್ಯ ಪೂಜೆಯ ಸಂದರ್ಭಗಳಲ್ಲಿ ವಿವಿಧ ಬಗೆಯ ಬಣ್ಣಗಳ ಪುಷ್ಪ ಮತ್ತು ಉಡಿಗೆಗಳನ್ನು ಧರಿಸಿ ಅಲಂಕಾರ ಮಾಡಿದರೂ ಮುಖದಲ್ಲಿನ ಕಣ್ಗಳ ಕಾಂತಿ ಹೊಳೆಯುವಂತಾಗಲೂ ಹುಬ್ಬು ಮತ್ತು ಕಣ್ಗಳ ಗುಡ್ಡೆಗಳಿಗೆ ಹಿತಮಿತವಾದ ಕಪ್ಪು ವರ್ಣವನ್ನು ಲೇಪಿಸಿ ದೇವಿಯು ಕಂಗೊಳಿಸುವಂತೆ ಮಾಡುವುದು ಅನಿವಾರ್ಯವಾಗುತ್ತದೆ. ಶಿಲ್ಪಿ ಬಸವಣ್ಣನವರು ಸಹ ತಾವು ಮಾಡಿದ ದೇವಿಯ ಶಿಲ್ಪಕ್ಕೆ ಈ ಕ್ರಮವನ್ನು ಅನುಸರಿಸಿರುವುದು ಕಂಡು ಬರುವ ಅಂಶವಾಗಿದೆ.

ಬಸವಣ್ಣನವರು ಮಾಡಿರುವ ನೂರಾರು ಶಿಲ್ಪಗಳು ವಾಣಿಜ್ಯ ದೃಷ್ಟಿಯಿಂದ ಇವೆಯಾದರೂ ಕೆಲವನ್ನಾದರೂ ಉಲ್ಲೇಖಿಸುವುದು ಅವಶ್ಯಕವೆನಿಸುತ್ತದೆ. ಹುಬ್ಬಳ್ಳಿಯ ಲಕ್ಷ್ಮೇಶ್ವರದಲ್ಲಿನ ಮುಕ್ತಿ ಮಂದಿರಕ್ಕೆ ವಿಶ್ವಶಕ್ತಿ ಎಂಬ ಶಿರೋನಾಮೆಯಲ್ಲಿ ಪ್ರತಿಷ್ಠಾಪನಾಚಾರ್ಯರೈವರ ವಿಗ್ರಹ ಮಾಡಿಕೊಟ್ಟಿದ್ದಾರೆ. ಅವುಗಳೆಂದರೇ ಬುದ್ಧ, ಗುರುನಾನಕ, ಪೈಗಂಬರ್, ಮಧ್ವಾಚಾರ್ಯ ಮತ್ತು ಶಂಕರಾಚಾರ್ಯರು.

ಕರ್ನಾಟಕ ಸರ್ಕಾರ ಕನಕದಾಸರ ಶತಮಾನೋತ್ಸವ ಆಚರಿಸಬೇಕೆಂದು ನಿರ್ಧರಿಸಿ ಕನಕದಾಸರ ಜೀವನ ಸಾಧನೆಯನ್ನು ಅನುಸರಿಸಿ ಚಿತ್ರ ಬರೆಸುವುದರ ಜೊತೆಗೆ ಅದರ ಮೂರ್ತಿಯನ್ನು ಮಾಡಿಸಬೇಕೆಂದು ನಿರ್ಧರಿಸಿದುದರ ಅಂಗವಾಗಿ ತಜ್ಞರ ಸಮಿತಿ ಮಾಡಿದಾಗ ಆಗ್ಗೆ ನಾಗೇಂದ್ರ ಸ್ತಪತಿಗಳು, ಎಸ್. ನಂಜುಂಡಸ್ವಾಮಿ, ಮಧುಗಿರಿ ರಾಮು, ಬಸವಣ್ಣ ಮುಂತಾದವರು ಮಾದರಿಯನ್ನು ರಚಿಸಿದುದನ್ನು ನಾನು ಸ್ತಪತಿಯವರ ವಿದ್ಯಾರ್ಥಿಯಾಗಿದ್ದಾಗ ನೋಡಿದವನಾಗಿದ್ದೆನು. ಕೊನೆಗೆ ಅಂಗೀಕಾರವಾದದ್ದು ಶಿಲ್ಪ ಮಾಡಲಿಕ್ಕೆ ಬಸವಣ್ಣನವರಿಗೆ ಮಾತ್ರ. ಈ ಸಂದರ್ಭದ ಸದುಪಯೋಗ ಮಾಡಿಕೊಂಡು ಅತ್ಯಲ್ಪ ಅವಧಿಯಲ್ಲಿ ಆಳೆತ್ತರದ ಶಿಲ್ಪ ಮಾಡಿ ಮೆಚ್ಚುಗೆಗೆ ಪಾತ್ರರಾದರು. ತದನಂತರ ಚಿತ್ರದುರ್ಗ, ಕಾಗಿನೆಲೆ ಮತ್ತಿತರ ಕಡೆಗೆ ಅದೇ ಶೈಲಿಯ ಶಿಲ್ಪಿಗಳಿಗೆ ಬೇಡಿಕೆ ಬಂತು. ಮೈಸೂರು ನಗರ ಸಭೆಗಾಗಿ ಅಂಬೇಡ್ಕರ್ ಪ್ರತಿಮೆ, ಮಂಡ್ಯಕ್ಕೆ ಸರ್ ಎಂ. ವಿಶ್ವೇಶ್ವರಯ್ಯನವರ ಭಾವಶಿಲ್ಪ, ಮೈಸೂರಿನ ಒಂಟಿಕೊಪ್ಪಲ್‌ಗೆ ಲಕ್ಷ್ಮೀನರಸಿಂಹ, ನಂಜನಗೂಡಿಗೆ ಕಾಳಿವಿಗ್ರಹ. ತುಮಕೂರಿನ ಕನ್ನಿಕಾಪರಮೇಶ್ವರಿ ದೇವಸ್ಥಾನಕ್ಕೆ ಲಕ್ಷ್ಮೀನಾರಾಯಣ, ನಂಜನಗೂಡಿನ ಕನಕದಾಸ ವಿದ್ಯಾರ್ಥಿನಿಲಯಕ್ಕೆ ಅಮೃತ ಶಿಲೆಯ ಬಾಪೂಜಿ, ಹಂಸಭಾವಿಗೆ ನಟರಾಜ, ಆನೆಮಲೆಗೆ ಗಣಪತಿ, ನಂತರ ಬೇಲೂರು, ಕೆರೂರು, ಹೊನ್ನೂರು, ಬಿಜಾಪುರ, ಚಿಕ್ಕನಾಯ್ಕನಹಳ್ಳಿ, ಸೋಮನಹಳ್ಳಿಗಳಿಗೆ ಮಾಡಿದವುಗಳು ಅನೇಕ.

ಬೆಂಗಳೂರಿನ ಶಿವಬಾಲಯೋಗಿಗಳ ಆಶ್ರಮಕ್ಕೆ ಸುಮಾರು ೪½ ಅಡಿ ಎತ್ತರದ ಬ್ರಹ್ಮ, ವಿಷ್ಣು, ಮಹೇಶ್ವರ ಮತ್ತು ಶಿವಬಾಲಯೋಗಿಗಳ ರೂಪಶಿಲ್ಪ, ಇಂದಿರಾನಗರದಲ್ಲಿನ ಬಿರ್ಲಾ ಗುಂಪಿನವರ ಮಂದಿರಕ್ಕೆ ಕಾಳಿಂಗ ಮರ್ದನ ಕೃಷ್ಣ, *ಉಡುಪಿಗೆ ಬೃಂದಾವನ; ಮೈಸೂರಿನ ಅಕ್ಕನಬಳಗಕ್ಕೆ ಅಕ್ಕಮಹಾದೇವಿ.ಕೋತಿಬಂಡೆ ಎಂದೇ ಪ್ರಸಿದ್ಧವಾಗಿರುವ ವಿಜಯನಗರದಲ್ಲಿರುವ ಆ ಏಳೆಂಟು ಅಡಿ ಎತ್ತರದ ಕಗ್ಗಲ್ಲಿನ ಬಂಡೆಯಲ್ಲಿ ಆಂಜನೇಯನ ಉಬ್ಬು ಶಿಲ್ಪ ಮತ್ತು ಕರಿಕಲ್ಲಿನಲ್ಲಿ ಗಣಪತಿ ಇವೆರಡನ್ನು ಉಚಿತವಾಗಿ ಮಾಡಿಕೊಟ್ಟಿರುವುದು ದಾಖಲೆಗಳಿಂದ ತಿಳಿಯುವ ಅಂಶವಾಗಿದೆ.

ರಾಷ್ಟ್ರ ಮಟ್ಟದಲ್ಲಿ ಗುಜರಾತಿನ ಜಾಮ್‌ನಗರಕ್ಕೆ ಬೇಲೂರಿನ ಶಿಲಾಬಾಲಿಕೆಯರನ್ನೋಲುವ ಮುಕುರ ಮುಗ್ಧೆ (Lady with mirror), ಶುಕಭಾಷಿಣಿ (Lady with parrot), ಡೆಲ್ಲಿಯ ಅಶ್ವತ್ಥನಗರಕ್ಕೆ ಅಲ್ಲಿನ ಗ್ರಾಹಕರ ಅಪೇಕ್ಷೆಯಂತೆ ನೇಪಾಳದಲ್ಲಿನ ಪಶುಪತಿ ದೇವಾಲಯದಲ್ಲಿರುವ ಮೂರ್ತಿಯ ತರಹ ಪಂಚಮುಖ ಪರಮೇಶ್ವರ ಹಾಗೂ


ತಾಯಿ–ಮಗು



ಶಿವಬಾಲಯೋಗಿಗಳು – ಅನಂತಪುರ

ಸೂರ್ಯ, ಗಣಪತಿ, †ಕಲ್ಕತ್ತದಲ್ಲಿನ ಬಿರ್ಲಾಮಂದಿರಕ್ಕೆ ವನವಾಸ ರೂಪದಲ್ಲಿರುವ ರಾಮ ಮತ್ತು ಸೀತೆ; ಆಂಧ್ರಪ್ರದೇಶದ ರಾಜಮಂಡ್ರಿಗೆ ಪಾಂಡುರಂಗ ರುಕ್ಮಾಯಿ, ಅನಂತಪುರಕ್ಕೆ ಸುಬ್ರಮಣ್ಯ, ವಲ್ಲಿ, ದೇವಯಾನಿ; ಹಳೆದೆಹಲಿಗೆ ನಿತ್ಯಾನಂದ ಸ್ವಾಮೀಜಿ, ಗಣಪತಿ, ಚಾಮುಂಡೇಶ್ವರಿ, ಕೈಲಾಸಶಂಕರ, ನಂದಿ, ಈಶ್ವರ; ಮತ್ತಿತರ ಹಲವಾರು ಮೂರ್ತಿಗಳನ್ನು ಮಾಡಿಕೊಟ್ಟಿದ್ದಾರೆ.

ಅಂತರರಾಷ್ಟ್ರೀಯವಾಗಿ ಅಮೇರಿಕಾದ ಮಿಚಿಗನ್ ಹಿಂದೂ ದೇವಾಲಯಕ್ಕೆ ವಿಶ್ವೇಶ್ವರಸ್ವಾಮಿ, ವಿಶಾಲಾಕ್ಷಿ, ಸಿದ್ಧಿ ಗಣಪತಿ, ನಂದಿ, ಚಂಡಿಕೇಶ್ವರ, ಭೈರವ ಮೂರ್ತಿಗಳನ್ನೂ ಜಪಾನಿಗೆ ತಾಯಿಮಗು, ಬುದ್ಧ ಮತ್ತು ಶಿವಪಾರಮ್ಯದ ಮೂರ್ತಿಗಳಾದ ವೃಷಭವಾಹನಮೂರ್ತಿ, ಗಜಾಸುರ ಮರ್ಧನ, ಚಂಡಿಕೇಶ್ವರ, ದಕ್ಷಿಣಾಮೂರ್ತಿ, ಶಿವ ಪಾರ್ವತಿ, ಕಲ್ಯಾಣಸುಂದರ ಮೂರ್ತಿ, ಹರಿಹರ ಮೂರ್ತಿಗಳಲ್ಲದೇ (೧೯೭೧) ಬೇಲೂರಿನ ಮದನಿಕೆಯರ ರೀತ್ಯ ಶೃಂಗಾರ ವಿಗ್ರಹಗಳಾದ ದರ್ಪಣಸುಂದರಿ (Lady with mirror), ಶುಕಭಾಷಿಣಿ (Lady with parrot), ಪತ್ರಲೇಖನೆ (Lady with letter writing) ಮತ್ತು ಜಪಾನಿ ಧರ್ಮಗುರುಗಳಾದ ತೆನೊಸೆನ್ ಮತ್ತು ಜೆನೊಸೆನ್ ಇವರುಗಳ ಭಾವಶಿಲ್ಪಗಳನ್ನು ಮಾಡಿ ಕೊಟ್ಟು ತಮ್ಮ ಖ್ಯಾತಿಯ ಪರಿಧಿಯನ್ನು ಸಾಗರದಾಚೆಗೂ ಪಸರಿಸಿಕೊಂಡಿದ್ದರು.



ನಿತ್ಯಾನಂದ ಸ್ವಾಮೀಜಿ – ದೆಹಲಿ

ಕನ್ನಡ ನಾಡಿನಲ್ಲಿ ಅ.ನ. ಕೃಷ್ಣರಾಯರನ್ನು ಮರೆಯುವಂತಿಲ್ಲ. ನಾಡು ನುಡಿಗಳಿಗೆ ಮಾಡಿದ ಹೋರಾಟ, ಜಡತೆಯಿಂದಿರುವ ಜನರನ್ನು ಬಡಿದೆಬ್ಬಿಸುವ ಕೆಲಸ ಒಂದೇ ಎರಡೇ! ಹಲವು ರೀತಿ ವಿಭಿನ್ನ ಶೈಲಿ. ಈ ದಿಸೆಯಲ್ಲಿ ಒಂದೆರಡು ಗಮನಾರ್ಹ ಸಂಗತಿಗಳನ್ನು ನೆನಸಿಕೊಳ್ಳುವುದು ಅವಶ್ಯ.

ಹಿಂದೂಸ್ತಾನಿ ಸಂಗೀತದ ದಿಗ್ಗಜ ಹಲವಾರು ರಾಷ್ಟ್ರಪ್ರಶಸ್ತಿ ವಿಜೇತ ಮಲ್ಲಿಕಾರ್ಜುನ ಮನ್ಸೂರ್‌ರವರಿಗೆ ಕನ್ನಡಕ್ಕೊಂಡು ಸ್ಥಾನಮಾನ ನೀಡಿದಂತ ವಚನಗಳನ್ನು ಹಿಂದೂಸ್ತಾನಿ ರಾಗದಲ್ಲಿ ಏಕೆ ಹಾಡಬಾರದು ಎಂದು ಪ್ರೇರೇಪಿಸಿದ ಕಾರಣ ಎಚ್ಚೆತ್ತ ಮನ್ಸೂರ್ ಅವರು ಅಂದೇ ಸಂಕಲ್ಪಿಸಿ ಹಾಡಲಿಕ್ಕೆ ಆರಂಭಿಸಿದುದರ ಪರಿಣಾಮ ಅವರ ಶಿಷ್ಯ ಪರಂಪರೆ ರಾಷ್ಟ್ರದೆಲ್ಲೆಡೆ ವಚನಗಳನ್ನು ಹಾಡುತ್ತಾ ಬಂದಿದ್ದಾರೆ. ವಚನ ಗಾಯನ ಸಮೃದ್ಧವಾಗಿ ಎಲ್ಲೆಡೆ ಬೆಳೆಯುತ್ತಿದೆ.

ಹಾಗೆಯೇ ಬಸವಣ್ಣನವರು ದೇವತಾ ಮೂರ್ತಿಗಳನ್ನೇ ಮಾಡುತ್ತಿದ್ದುದನ್ನು ಗಮನಿಸಿ ಅ.ನ. ಕೃಷ್ಣರಾಯರು, ಚಿತ್ರ ಕಲಾವಿದ ಮದುಗಿರಿರಾಮು, ನೃತ್ಯ ಕಲಾವಿದ ಕುಲಕರ್ಣಿ ಇವರುಗಳು ಸೇರಿ ಇಂದು ನಮ್ಮ ಜನ ಯಾವುದೇ ಭಾವಶಿಲ್ಪ ಮಾಡಿಸಬೇಕಾದರೇ ಮುಂಬೈನತ್ತ ಮುಖ ಮಾಡುತ್ತಿದ್ದಾರೆ. ಇಲ್ಲಿರುವ ಶಿಲ್ಪಿಗಳಿಗೆ ಅವಮಾನವಲ್ಲವೆ? ನೀವೇಕೆ ಪ್ರಯತ್ನಿಸಬಾರದು ಎಂಬ ಪ್ರಶ್ನಾರ್ಥಕ ನುಡಿಯಿಂದ ಎಚ್ಚೆತ್ತ ಬಸವಣ್ಣನವರು ಭಾವಶಿಲ್ಪದತ್ತ ಗಮನ ಹರಿಸಲು ಆರಂಭಿಸಿ ಅದರಲ್ಲಿ ಸಿದ್ಧಿಯನ್ನು ಪಡೆಯುತ್ತಾರೆ.

ಇವರು ಮಾಡಿರುವ ಪ್ರಮುಖ ವ್ಯಕ್ತಿ ಶಿಲ್ಪಗಳೆಂದರೇ ಮೈಸೂರು ಜಿಲ್ಲೆಯ ನಂಜನಗೂಡು ಸಮೀಪದ ಬದನವಾಳು ಗ್ರಾಮಕ್ಕೆ ಮಹಾತ್ಮ ಗಾಂಧಿಯವರ ಪುರುಷ ಪ್ರಮಾಣದ ಕುಳಿತ ಪ್ರತಿಮೆ (೧೯೭೦). ಇದಕ್ಕೊಂದು ಇತಿಹಾಸವುಂಟು. ೧೯೪೪ರಲ್ಲಿ ಕಾಲ್ನಡಿಗೆಯಲ್ಲಿ ಮಹಾತ್ಮ ಗಾಂಧಿಯವರು ತಮ್ಮ ಅನುಯಾಯಿಗಳೊಡನೆ ಸ್ವಾತಂತ್ರ್ಯ ಚಳುವಳಿಯನ್ನು ತೀವ್ರಗೊಳಿಸುವುದರ ಅಂಗವಾಗಿ ತಗಡೂರು, ಬದನವಾಳು ಮತ್ತು ಸುತ್ತಮುತ್ತಲಿನ ಗ್ರಾಮಕ್ಕೆ ಭೇಟಿ ನೀಡಿದ ನೆನಪಿಗೆ ಮಾಡಿದ ಶಿಲ್ಪವಾಗಿದ್ದು ಅದನ್ನು ಅಂದಿನ ಮುಖ್ಯ ಮಂತ್ರಿ ವೀರೇಂದ್ರ ಪಾಟೀಲರು ಉದ್ಘಾಟಿಸಿರುವ ಚಾರಿತ್ರಿಕ ದಾಖಲೆ ಇದೆ. ತದನಂತರದಲ್ಲಿ ಒಂದಾದ ಮೇಲೊಂದು ಭಾವಶಿಲ್ಪಗಳ ಬೇಡಿಕೆ ಬರಲಾರಂಭಿಸಿ ಚಿಕ್ಕಮಗಳೂರಿಗೊಂದು ಗಾಂಧಿಪ್ರತಿಮೆ, ಮಂಡ್ಯಕ್ಕೆ ಸರ್ ಎಂ. ವಿಶ್ವೇಶ್ವರಯ್ಯ ಅವರ ಭಾವಶಿಲ್ಪ, ನಾಡಿನ ಇತರೆಡೆಗೆ ಅದರಲ್ಲೂ ಕಾವೇರಿ ಹರಿಯುವ ನಾಡಿನೆಲ್ಲೆಡೆಗೆ ಹಲವಾರು ಸರ್ ಎಂ. ವಿಶ್ವೇಶ್ವರಯ್ಯ ಅವರ ರೂಪಶಿಲ್ಪವನ್ನು ಕುಳಿತಿರುವ ನಿತ್ಯಾನಂದ ಸ್ವಾಮೀಜಿಯ ನೈಜ ಶಿಲ್ಪವನ್ನು ದೆಹಲಿಗೂ, ಮಹಾತ್ಮ ಗಾಂಧೀಜಿಯವರ ಪೂರ್ಣ ಪ್ರಮಾಣದ ಅಮೃತಶಿಲೆಯ ಶಿಲ್ಪವನ್ನು ಕೊಡಗಿನ ಪೊನ್ನಂ ಪೇಟೆಗೂ, ಹಿರಿಯ ಕೈಗಾರಿಕೋದ್ಯಮಿ ಕೇಜ್ರಿವಾಲ್ ಅವರಿಗೆ ಸಾರಾನಾಥದಲ್ಲಿರುವ ಬುದ್ಧನ ವಿಗ್ರಹದಂತೆಯೇ ಮತ್ತೊಂದು ವಿಗ್ರಹ, ಮೈಸೂರಿನ ಇತರ ಸ್ಥಳಗಳಿಗೆ ಮಹಾರಾಜರುಗಳ ರೂಪಶಿಲ್ಪವು ಸೇರಿದಂತೆ ಹಲವಾರು ಮಾಡಿಕೊಡುವ ಮೂಲಕ ಕರ್ನಾಟಕದಲ್ಲಿ ಅದರಲ್ಲೂ ಮೈಸೂರಿನಲ್ಲಿ ಭಾವಶಿಲ್ಪ ರಚನೆಗೆ ಒಂದು ಹೊಸ ಆಯಾಮ ಕಲ್ಪಿಸಿದರು.

ಈ ಸಂದರ್ಭದಲ್ಲಿ ಚಿಂತಿಸಬೇಕಾದ ಅಂಶವೆಂದರೆ ಬದುಕಿದ್ದವರ ಭಾವಶಿಲ್ಪವನ್ನು ಮಾಡುವುದು ಒಂದು ರೀತಿಯಲ್ಲಿ ಸುಲಭವೆನ್ನಬಹುದು. ಆತನ ತಲೆಯ ಎಲ್ಲಾ ಭಾಗಗಳನ್ನು ಪ್ರತ್ಯಕ್ಷವಾಗಿ ವೀಕ್ಷಿಸಿ ಸಾಧ್ಯವಾದರೇ ಕೂರಿಸಿಕೊಂಡು ಇಲ್ಲವೇ ಎಲ್ಲಾ ಕೋನಗಳಿಂದ ಅಂದರೇ ಹಿಂಬದಿ, ಮುಂಬದಿ ಪಾರ್ಶ್ವ ಇತ್ಯಾದಿಯಾಗಿ ಛಾಯಾಚಿತ್ರ ತೆಗೆದುಕೊಂಡು ಭಾವಶಿಲ್ಪಕ್ಕೆ ರೂಪ ಕೊಡಬಹುದು. ಆದರೇ ಸತ್ತ ವ್ಯಕ್ತಿಯ ಭಾವಶಿಲ್ಪ ಮಾಡಬೇಕಾದರೇ ದೊರೆತ ಮುಖಚಿತ್ರವೊಂದನ್ನೇ ಆಧಾರವಾಗಿಟ್ಟುಕೊಂಡು ಉಳಿದಂತೆ ಎಲ್ಲಾ ಪಾರ್ಶ್ವಗಳನ್ನು ರೂಪಿಸಬೇಕಾಗುತ್ತದೆ. ಅವರಂತೆಯೇ ರೂಪವುಳ್ಳ ಸಂಬಂಧಿಕರಿದ್ದರೇ ಅವರನ್ನು ನೋಡಿ ಮಾಡಬೇಕಾಗುತ್ತದೆ. ಶಿಲ್ಪಿಯ ಬುದ್ಧಿವಂತಿಕೆ, ಅನುಭವವೇ ಆ ಶಿಲ್ಪದ ಜೀವಾಳ.

ಬಸವಣ್ಣನವರು ಗ್ರಹಿಕೆ ಮತ್ತದನ್ನ ಕಾರ್ಯರೂಪಕ್ಕೆ ತರುವ ವಿಧಾನವನ್ನು ಸಿದ್ಧಿಸಿಕೊಂಡಿದ್ದರು. ಅದನ್ನೇ ತಮ್ಮ ಪುತ್ರನಿಗೂ ಕಲಿಸಿದುದರ ಪರಿಣಾಮ ಯೋಗಿರಾಜ ಭಾವಶಿಲ್ಪಗಳಿಗೆ ಬೇಡಿಕೆಯ ಶಿಲ್ಪಿಯಾಗಿದ್ದಾರೆ.

ದೇವತಾ ಶಿಲ್ಪ-ಭಾವಶಿಲ್ಪ ಕೆತ್ತನೆಯಲ್ಲದೇ ಅಪ್ಪಟ ವಾಣಿಜ್ಯ ಎನ್ನಬಹುದಾದ ಶಿಲಾಫಲಕಗಳಲ್ಲಿ ಅಕ್ಷರ ಕೆತ್ತನೆ ಮಾಡುವುದು ಬಸವಣ್ಣನವರ ಕಾರ್ಯಕ್ಷೇತ್ರದ ಮತ್ತೊಂದು ಭಾಗವಾಗಿತ್ತು. ಇಟಾಲಿಯನ್ ಮಾರ್ಬಲ್ ಆಗ್ಗೆ ಧಾರಾಳವಾಗಿ ಸಿಗುತ್ತಿದ್ದು ಅಕ್ಷರ ಕೆತ್ತನೆಗೆ ಹೇಳಿ ಮಾಡಿಸಿದಂತಿತ್ತು. ಈ ಕಲ್ಲೇ ವಿಗ್ರಹ ಕೆತ್ತನೆಗೂ ಪೂರ್ಣ ಸಹಕಾರಿಯಾದುದು. ಗ್ರೀಕ್ ದೇಶದ ಮ್ಯೂಸಿಯಂನಲ್ಲಿರುವ ಪ್ರಖ್ಯಾತ ಶಿಲ್ಪಗಳೆಲ್ಲವು ಇದೇ ಕಲ್ಲಿನಿಂದಾದವು ಅಷ್ಟೇ ಅಲ್ಲ, ಮೈಸೂರಿನ ಅರಮನೆಗೆ ದಕ್ಷಿಣ ಭಾಗದಲ್ಲಿರುವ ಹಿಂದಿನ ಮಹಾರಾಜರುಗಳ ಶಿಲ್ಪಗಳೂ ಸಹ ಇಟಾಲಿಯನ ಮಾರ್ಬಲ್‌ನಿಂದಲೇ ಆಗಿರುವಂತಹದ್ದು.



**ಗಾಂಧೀಜಿ – ಅಮೃತಶಿಲಾಶಿಲ್ಪ, ಚಿಕ್ಕಮಗಳೂರು**




ಗಿರಿಜಾ ಕಲ್ಯಾಣ

## ಗಿರಿಜಾ ಕಲ್ಯಾಣ

ಯಾವುದೇ ಸಂದರ್ಭ ಸನ್ನಿವೇಶಗಳನ್ನು ನೋಡಿದಂತೆ ಯಥಾವತ್ತಾಗಿ ಚಿತ್ರಿಸುವುದು ಸುಲಭದ ಮಾತಲ್ಲ. ರಾಜಾ ರವಿವರ್ಮ, ಸಿದ್ಧಲಿಂಗಸ್ವಾಮಿಗಳು, ಕೇಶವಯ್ಯ, ಎಸ್. ಎಂ. ಪಂಡಿತ, ಎಂ. ಟಿ. ವಿ. ಆಚಾರ್ಯ ಮುಂತಾದವರು ರಚಿಸಿದ ದೇವದೇವಿಯರ ಕಲ್ಯಾಣ ಇಲ್ಲವೇ ಸಭೆ ನಡೆಸುತ್ತಿರುವುದು, ರಾಜನ ಆಸ್ಥಾನ, ಯುದ್ಧ ಸನ್ನಿವೇಶ, ಕುಸ್ತಿ ಕ್ರೀಡೆಯಂತಹ ಆಟೋಟಗಳು, ಮೆರವಣಿಗೆ ಇತ್ಯಾದಿ. ಇಂತಹವುಗಳಲ್ಲಿ ಹಲವಾರು ಪಾತ್ರಗಳಿದ್ದು ಕೇಂದ್ರ ವ್ಯಕ್ತಿಯ ಸುತ್ತ ಹಿಂದೆ ಮುಂದೆ ಅಕ್ಕ ಪಕ್ಕಗಳಲ್ಲಿ ಮತ್ತು ಅನತಿ ದೂರದಲ್ಲಿ ಹಾಗೂ ಅವುಗಳಿಗೆ ಹೊಂದಿಕೊಂಡಂತೆ ಕಾಣುವ ಆ ಸ್ಥಳದಲ್ಲಿನ ವಸ್ತುಗಳು, ಪರಿಸರ ಒಂದೇ ಎರಡೇ ಹಲವು ಬಗೆ, ಹಲವು ತೆರ. ಇಂತಹ ಸನ್ನಿವೇಶವನ್ನು ಕಾಗದದ ಮೇಲಾಗಲೀ ಕ್ಯಾನ್‌ವಾಸ್ ಮೇಲಾಗಲೀ ಚಿತ್ರಿಸುವಾಗ ವ್ಯತ್ಯಾಸವಾದರೆ ಅದನ್ನು ಮತ್ತೊಮ್ಮೆ ಬರೆದು ಬಣ್ಣ ತುಂಬಿ ಸರಿಪಡಿಸಬಹುದು. ಮಣ್ಣು, ಗಾರೆ, ಸಿಮೆಂಟ್, ಪ್ಲಾಸ್ಟರ್ ಆಫ್ ಪ್ಯಾರಿಸ್ ನಂತಹವುಗಳಲ್ಲಿ ಮಾಡುವ ಶಿಲ್ಪಗಳಲ್ಲಿಯೂ ಸಹ ಸರಿಪಡಿಸಲು ಸಾಧ್ಯತೆ ಇದೆ. ಈ ಮಾತಿಗೆ ಲೋಹಶಿಲ್ಪವೂ ಹೊರತಲ್ಲ. ಆದರೇ ಅಂತಹ ಸನ್ನಿವೇಶವೊಂದನ್ನು ಕಲ್ಲಿನಲ್ಲಾಗಲೀ ಮರದಿಂದಾಗಲೀ ನಿಗದಿತ ಅಳತೆಯೊಳಗೆ ಕೆತ್ತನೆ ಮಾಡುವುದೆಂದರೇ ಅಪಾರ ಅನುಭವವಿರಬೇಕು.

ಸನ್ನಿವೇಶಕ್ಕನುಗುಣವಾಗಿ ಚಿತ್ರವನ್ನು ಕಾಗದದ ಮೇಲೆ ಬರೆದುಕೊಂಡು ಅದನ್ನು ಹಂತ ಹಂತವಾಗಿ ಕಲ್ಲಿನ ಮೇಲೆ ನಕಲು ಮಾಡಿಕೊಳ್ಳಬೇಕು ಇಲ್ಲವೇ ಬರೆದುಕೊಂಡು ಪರಸ್ಥಳ (ದಪ್ಪಗಳನ್ನು) ಕೆತ್ತಿ ತೆಗೆಯುವಾಗ ಅತ್ಯಂತ ಜಾಗರೂಕತೆಯಿಂದ ಮುಂದೆ ಯಾವುದು ಬರುತ್ತದೆ, ಹಿಂದೆ ಯಾವುದು ಬರುತ್ತದೆ, ಒಂದಕ್ಕೊಂದರ ಸಂಬಂಧ ಇತ್ಯಾದಿ ಗಮನಿಸಿಕೊಂಡೇ ಪ್ರತಿ ಹಂತದಲ್ಲಿಯೂ ಮುನ್ನೆಚ್ಚರಿಕೆಯಿಂದಲೇ ಮಾಡಬೇಕಾಗುತ್ತದೆ. ಈ ಕ್ರಮವನ್ನೇ ಧ್ಯಾನ ಅಥವಾ ತಪಸ್ಸು ಎಂದರೇ

ತಪ್ಪಾಗಲಿಕ್ಕಿಲ್ಲ. ಏಕೆಂದರೇ ಅನ್ಯ ವಿಷಯಾಸಕ್ತವಾಗಿ ಚಿಂತಿಸುತ್ತಾ ಇಂತಹ ಸಂಯೋಜನಾ ಶಿಲ್ಪವನ್ನು ಆರಂಭಿಸಿದ್ದೇ ಆದರೆ ಅವನಗರಿವಿಲ್ಲದಂತೆ ಎಲ್ಲೋ ಒಂದು ಕಡೆ ಆ ಪಾತ್ರ ಅಥವಾ ಸನ್ನಿವೇಶ ತಪ್ಪಿಹೋಗಬಹುದು.

ಈ ಎಲ್ಲಾ ಕಟ್ಟೆಚ್ಚರದಿಂದ ಬಸವಣ್ಣನವರು ಮಾಡಿರುವ 'ಗಿರಿಜಾ ಕಲ್ಯಾಣ' ಶೀರ್ಷಿಕೆಯೇ ಹೇಳುವಂತೆ ಪರಮೇಶ್ವರ ಪಾರ್ವತಿಯನ್ನು (ಗಿರಿಜೆ) ಮದುವೆಯಾಗುವ ಸನ್ನಿವೇಶ. ಬ್ರಹ್ಮನೇ ಪುರೋಹಿತ, ವಿಷ್ಣು ಆದಿಯಾಗಿ ಇನ್ನಿತರ ದೇವತೆಗಳ ಸಮೂಹವಿರುವ ಉಬ್ಬುಶಿಲ್ಪ. ಇದನ್ನು ಆಂಗ್ಲ ಭಾಷೆಯಲ್ಲಿ Relief work ಎನ್ನುತ್ತಾರೆ.

ಈ ಶಿಲ್ಪದಲ್ಲಿ ಶಿವ ಮತ್ತು ಗಿರಿಜೆ ಎದುರುಬದುರಾಗಿ ನಿಂತಂತೆ ಇದ್ದರೆ, ವಿಷ್ಣು ಅವರೀರ್ವರ ಮಧ್ಯದಲ್ಲಿ ಧಾರೆ ಎರೆಯುತ್ತಾ ಮುಖ ಮುಂದು ಮಾಡಿ ನಿಂತಿರುತ್ತಾನೆ. ಮುಂದೆ ಯಾಗ ಕುಂಡ, ಕುಂಡದ ಮುಂದೆ ಯಜ್ಞಕರ್ತ ಬ್ರಹ್ಮ ಮತ್ತು ಅವನ ಯಾಗ ಪರಿಕರಗಳು, ಹಣ್ಣಿನ ತಟ್ಟೆ, ಹೂವಿನ ಬುಟ್ಟಿ, ಇತ್ಯಾದಿ. ಅದೇ ಸಾಲಿನಲ್ಲಿ ತುಂಬುರ ನಾರದ, ಮೂರು ಕಾಲುಗಳನ್ನುಳ್ಳ ಭೃಂಗಿ, ಶಿವನ ವಾಹನವಾದ ನಂದಿಕೇಶ್ವರ, ಶುಕಮುನಿಯು ಸೇರಿದಂತೆ ಹಲವಾರು ಋಷಿಗಳು, ಶಿವ-ಗಿರಿಜೆಯರ ಅಕ್ಕ ಪಕ್ಕ ಮತ್ತು ಹಿಂದಿನ ಸಾಲುಗಳಲ್ಲಿ ಗಿರಿಜೆಯ ತಂದೆ ಹಿಮವಂತ, ವಿಷ್ಣುವಿನ ಪತ್ನಿ ಲಕ್ಷ್ಮಿ, ಬ್ರಹ್ಮನ ಪತ್ನಿ ಸರಸ್ವತಿ, ಅಲ್ಲಲ್ಲಿ ಗಾಳಿ ಬೀಸುವ ಛಾಮರ ಧಾರಿಣಿಯರು, ಶಿವನ ಕಡೆಯಲ್ಲಿಯೂ ಹಿಂಬದಿ ಸಾಲಿನಲ್ಲಿ ಅವನ ಭಕ್ತ ಪರಿವಾರ, ಶುಭವನ್ನರಸುವ ದೇವತೆಗಳ ಸಾಲು.

ಇಲ್ಲಿನ ಪ್ರತಿಯೊಂದು ಉಬ್ಬು ಶಿಲ್ಪವು ನೈಜತೆಯಿಂದೊಡಗೂಡಿದ ಮುಖಲಕ್ಷಣ, ಕಿರೀಟ, ಕೈನ ಹಿಂಚಾಚು-ಮುಂಚಾಚುವಿಕೆ, ವಸ್ತ್ರವಿನ್ಯಾಸದಲ್ಲಿ ನೈಜತೆ, ಆಭರಣಗಳ ಶೃಂಗಾರ, ದೇವತೆಗಳ ವರ್ಚಸ್ಸು ಪ್ರಭಾವಕ್ಕನುಗುಣವಾದ ದೇಹ ಸೌಂದರ್ಯ ಮತ್ತು ಕೈಯಲ್ಲಿ ಹಿಡಿದಿರುವ ಪರಿಕರಗಳು, ನಿಂತ ನಿಲುವಿನಲ್ಲಿ ಒಬ್ಬೊಬ್ಬರದು ಒಂದು ರೀತಿಯಾಗಿರುವುದಲ್ಲದೇ ಮಟ್ಟಸವಾದ ಹಿನ್ನೆಲೆಯಲ್ಲಿಯೇ ಯಥಾದರ್ಶನ ನಿಯಮದಂತೆ (Perspective) ಹತ್ತಿರದಿಂದ ದೂರ ದೂರಕ್ಕೆ ಸಾಗಿದಂತೆ ಕಾಣುವ ತೆರದ ಅಡ್ಡಗೆರೆ, ಉದ್ದಗೆರೆಗಳನ್ನು ಕೆತ್ತಿ ಭೂಮಿಯ ಮೇಲಿನ ನೆಲಹಾಸಿನ ಕಲ್ಪನೆ ಬರುವಂತೆ ಮಾಡಿರುವುದು ಇದರ ವಿಶೇಷ. ಕೆತ್ತನೆಯ ಪ್ರಾರಂಭದಲ್ಲಿಯೇ ಕಲ್ಲಿನ ದಪ್ಪವನ್ನು ಉಳಿಸಿಕೊಂಡು ಪರದೆಯೋಪಾದಿಯಲ್ಲಿ ಇಲ್ಲವೇ ತೋರಣದಂತೆ ಚಿತ್ತಾರಗೊಳಿಸಿರುವುದು ಶಿಲ್ಪಿಯೋರ್ವನ ಸಾಧನೆಗೆ ಹಿಡಿದ ಕೈಗನ್ನಡಿಯಾಗಿದೆ. ಬಸವಣ್ಣನವರು ಮಾಡಿರುವ ಎಲ್ಲಾ ಶಿಲ್ಪಗಳಿಗಿಂತ ಉನ್ನತವಾದುದೆಂದು ಹೇಳಬಹುದಾಗಿದೆ. ಈ ಸಂದರ್ಭದಲ್ಲಿ ಸಹಾಯಕ ಶಿಲ್ಪಿ ವಿಷಕಂಠಾಚಾರ್‌ರವರನ್ನು ನೆನೆಯುವುದು ಸೂಕ್ತವೆನಿಸುತ್ತದೆ.

### ಕಾಳಿಂಗ ಮರ್ದನ ಕೃಷ್ಣ

ಶಿಲ್ಪಗಳಲ್ಲಿ ಪೂಜಾಶಿಲ್ಪಗಳು ಸೌಂದರ್ಯ ಅಥವಾ ಶೃಂಗಾರ ಶಿಲ್ಪಗಳು ಎಂಬೆರಡು ವಿಧ. ಪೂಜಾ ಶಿಲ್ಪಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಪ್ರಭಾವಳಿಯಿರುವುದನ್ನು ಕಂಡರೇ ಸೌಂದರ್ಯ ಶಿಲ್ಪಗಳಲ್ಲಿ ಪ್ರಭಾವಳಿಗಿಂತ ಯಾವ ಕೃತಿಯನ್ನು ಯಾವ ವಿಷಯವನ್ನಾಧರಿಸಿ ಮಾಡಬೇಕೆಂದಿರುವೆವೋ ಅದರ ಪರಿಪೂರ್ಣತೆ ಎದ್ದು ಕಾಣುವಂತಿರಬೇಕೆಂಬುದು ಮುಖ್ಯ ವಿಚಾರವಾಗಿರುತ್ತದೆ.

ಹೀಗೆ ಬಸವಣ್ಣನವರು ಮಾಡಿರುವ ಸೌಂದರ್ಯ ಶಿಲ್ಪದಲ್ಲಿ ಸರ್ಪನ ಹೆಡೆಯ ಮೇಲೆ ಕುಳಿತಿರುವ ಬಾಲಕೃಷ್ಣನ ವಿಗ್ರಹ ಮನ ಸೆಳೆಯುತ್ತದೆ. ಯಾವ ದಿಕ್ಕಿನಿಂದಲಾದರೂ ನೋಡಬಹುದಾಗುವಂತೆ



**ಚಂಡಿಕೇಶ್ವರ ಪ್ರಸಾದ ಮೂರ್ತಿ**

ಕೆತ್ತಿದ್ದು ಸರ್ಪವು ತನ್ನ ಬಾಲವನ್ನು ಜಡೆಯಂತೆ ನುಲಿದುಕೊಂಡು ತನ್ನ ಏಳು ಹೆಡೆಗಳನ್ನು ಎತ್ತಿ ನಿಂತಂತೆಯೂ ಅದರ ಮೇಲೆ ಬಾಲಕೃಷ್ಣ ಹಸನ್ಮುಖಿಯಾಗಿ ಕುಳಿತು ತನ್ನ ಭಕ್ತ ಜನಕ್ಕೆ ಆಶೀರ್ವದಿಸುವಂತೆ ವರದ ಹಸ್ತವನ್ನೊಂದಿರುವ ರೂಪದ ಕೆತ್ತನೆ ಮಾಡಿದ್ದಾರೆ.

ಮಕ್ಕಳ ರೂಪಕೆತ್ತನೆ ಸಾಮಾನ್ಯ ಮುಖಗಳಿಗಿಂತ ಕೊಂಚ ಭಿನ್ನವಾದದ್ದು. ತುಂಬುಗಲ್ಲ, ದುಂಡಾದ ಮುಖ, ದೈಹಿಕ ಪ್ರಮಾಣವು ಮುಖದ ಎತ್ತರಕ್ಕೆ ಮೂರ್‍ನಾಲ್ಕು ಪಟ್ಟು ದೊಡ್ಡದು. ಇನ್ನು ಬೆಳವಣಿಗೆ ಕಂಡ ಬಾಲಕನಾದರೇ ನಾಲ್ಕೈದು ಪಟ್ಟು ದೊಡ್ಡದಾಗಿರುವಂತೆ ರೂಪಿಸಬೇಕಾಗಿದ್ದು ಇದೆಲ್ಲವನ್ನು ಚೆನ್ನಾಗಿ ಅರಿತಿದ್ದ ಬಸವಣ್ಣನವರು ಬಾಲಕ ಕೃಷ್ಣನನ್ನು ಸುಂದರವಾಗಿಸಿದ್ದಾರೆ. ಹಾಗೆಯೇ ಸರ್ಪದ ದೇಹವು ಹೇಗೇಗೆ ನುಲಿದು ಕೊಂಡಿರುತ್ತದೆಯೋ ಹಾಗೆ ಅದರ ಏರಿಳಿತಗಳನ್ನು ಮೈಮಾಟವನ್ನು ನೈಜತೆಯಿಂದಿರುವಂತೆ ಕೆತ್ತುವಲ್ಲಿ ಸಾಫಲ್ಯ ಕಂಡಿದ್ದಾರೆ. ಪೀಠವು ಸೇರಿದಂತೆ ಸುಮಾರು ಮೂರು ಅಡಿ ಎತ್ತರವಿದ್ದು ಸುಂದರ ಕೆತ್ತನೆ ಆಗಿದೆ.

**ಹರಿಹರ ಮೂರ್ತಿ**

ಜಗನ್ನಿಯಾಮಕನಾದ ದೇವರಿಗೆ ತಾ ಸೃಷ್ಟಿಸಿದ ಜನರೆಲ್ಲರೂ ಒಂದೇ ಎಂಬ ಭಾವನೆ ಇದ್ದರೂ ಆ ದೇವರುಗಳನ್ನೇ ಮುಬ್ಭಾಗವಾಗಿ ವಿಂಗಡಿಸಿ (ಬ್ರಹ್ಮ, ವಿಷ್ಣು, ಮಹೇಶ್ವರ) ಸೃಷ್ಟಿ, ಸ್ಥಿತಿ, ಲಯಗಳಿಗೆ ಅಧಿಪತಿಯನ್ನಾಗಿಸಿ ಪ್ರತ್ಯೇಕ ಪ್ರತ್ಯೇಕವಾಗಿ ವೈಭವೀಕರಿಸುವ ಪುರಾಣ ಸೃಷ್ಟಿಸುವುದರ ಮೂಲಕ ವಿಭಜನೆಗೆ ನಾಂದಿ ಹಾಡಿದ ಪುರಾಣಿಕರು ಅದು ಉಲ್ಬಣವಾಗಿ ಉದ್ವಿಗ್ನ ಪರಿಸ್ಥಿತಿ ನಿರ್ಮಾಣವಾದಾಗ ಹರಿ ಮತ್ತು ಹರ ಬೇರೆ ಬೇರೆ ಅಲ್ಲ ಎರಡೂ ಒಂದೇ ಎಂದು ಮತ್ತೊಂದು ಪುರಾಣ ಸೃಷ್ಟಿಸುವ ಮೂಲಕ ಒಂದು ಹೊಸ ಆಯಾಮವನ್ನು ಕಲ್ಪಿಸಿದುದರ ಫಲವಾಗಿ ಶಿಲ್ಪಿಗೊಂದು ಹೊಸ ವಿಷಯ ಸಿಕ್ಕಿದಂತಾಯಿತು. ತತ್ಪರಿಣಾಮ ರೂಪಿತವಾದುದೇ ಹರಿಹರಮೂರ್ತಿ.

ವಾಮನ ಪುರಾಣದಲ್ಲಿ

**ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣುವೇ**

ವಿಷ್ಣುವು ತಾನೇ ಶಿವನೆಂದು ಹೇಳುವ ವ್ಯಾಖ್ಯೆಯಿದೆ.

ಶಿಲ್ಪರತ್ನ ಎಂಬ ಶಾಸ್ತ್ರಗ್ರಂಥದಲ್ಲಿ ಹರಿಹರ ಮೂರ್ತಿಯ ಲಕ್ಷಣಗಳನ್ನು ಹೇಳಿದೆ. ಇವೆಲ್ಲವನ್ನು ಕ್ರೋಢೀಕರಿಸಿ ಬಸವಣ್ಣನವರು ಮಾಡಿದ ಶಿಲ್ಪದಲ್ಲಿ ಬಲಭಾಗವು ಶಿವನಂತೆಯೂ, ಎಡಭಾಗವೂ ವಿಷ್ಣುರೂಪದಂತೆಯೂ ದೇಹದ ಅರ್ಧರ್ಧ ಭಾಗವನ್ನು ಲಂಬವಾಗಿ ವಿಂಗಡಿಸಿ ಕೆತ್ತನೆ ಮಾಡಿದ್ದಾರೆ. ಶಿವನ ಭಾಗದಲ್ಲಿ ತಲೆ ಮೇಲೆ ಜಟಾಮುಕುಟ, ಚಂದ್ರ, ಕಿವಿಯಲ್ಲಿ ರುದ್ರಾಕ್ಷಿಯ ಆಭರಣ, ಬಲಗೈಯ ಮೇಲಿನ ಹಸ್ತದಲ್ಲಿ ತ್ರಿಶೂಲ, ಕೆಳಹಸ್ತ ವರದ ಮುದ್ರೆಯ ರೂಪದಲ್ಲಿದ್ದರೆ, ಕಟಿ ಭಾಗದಲ್ಲಿ (ಸೊಂಟ) ಚರ್ಮವನ್ನು ಧರಿಸಿದಂತೆಯೂ ಕೆತ್ತನೆ ಮಾಡಿದ್ದಾರೆ. ಎಡಭಾಗದ ಶಿರಸ್ಸು ಕಿರೀಟಮುಕುಟ ಧರಿಸಿದ್ದು ಕಿವಿಯಲ್ಲಿ ಮಕರ ಕುಂಡಲ ಧಾರಣೆಯಾಗಿದೆ. ಎಡಕೈಗಳೆರಡರಲ್ಲಿ ಮೇಲಿನದು ಶಂಖವನ್ನು ಹಿಡಿದಿದ್ದರೇ ಕೆಳಹಸ್ತವು ಅಭಯದ ರೂಪದಲ್ಲಿದೆ. ಕಟಿಭಾಗದಲ್ಲಿ ಪೀತಾಂಬರದ ಉಡುಗೆಯಂಥ ಅಲಂಕಾರಿಕ ಕೆತ್ತನೆಯಿದೆ. ಕೊರಳಾಭರಣ, ಭುಜಕೀರ್ತಿಗಳು ಒಂದೇ ತೆರನಾಗಿದ್ದು ಶಿವನ ಭಾಗದ ವಕ್ಷಸ್ಥಳ ಮಾತ್ರ ಗಡುಸಾಗಿ ದೃಢತೆಯನ್ನು ಸೂಸುವಂತಿದ್ದರೆ ವಿಷ್ಣುಭಾಗದಲ್ಲಿ ಸೌಮ್ಯತೆಯ ಸಾಕಾರವಿದೆ. ಹಾಗೆಯೇ ಮುಖಲಕ್ಷಣದಲ್ಲಿ ಸಹ ಮೂಗು, ತುಟಿ ಏಕತ್ರವಾಗಿದ್ದರೂ ಕಣ್ಣುಗಳಲ್ಲಿ ರೌದ್ರತೆ ಮತ್ತು ಶಾಂತತೆ ವ್ಯತ್ಯಯ ಕಾಣಬಹುದು. ಹಣೆಯಲ್ಲಿ ಧರಿಸಿದ ಮುದ್ರೆಗಳು ಸಹ ಶಿವನ ಭಾಗದಲ್ಲಿ ತ್ರಿಪುಂಡ್ರ ಭಸ್ಮಧಾರಣೆ ಇದ್ದರೆ ವಿಷ್ಣುಭಾಗದಲ್ಲಿ ನಾಮಗಳಿವೆ. ಪೀಠದ ಮೇಲೆ ನಿಂತಿರುವಂತೆ ರೂಪಿಸಿದ್ದು ಪ್ರಭಾವಳಿಯಲ್ಲಿ ಹರಿಹರೇಶ್ವರನ ಲೀಲೆಗಳನ್ನು ಕೆತ್ತಿರುವುದು ಒಂದು ವಿಶೇಷ. ಹಾಗೆಯೇ ಕೆಳಭಾಗದಲ್ಲಿ ಗಂಧರ್ವ ಕನ್ಯೆಯನ್ನು ಮೋದಕ ಹಿಡಿದ ದೇವತೆಗಳನ್ನು ಕೆತ್ತನೆ ಮಾಡಿ ಹರಿಹರ ಮೂರ್ತಿಗೆ ಒಂದು ಸೊಗಸಾದ ಸ್ವರೂಪವನ್ನು ನೀಡಿದ್ದಾರೆ (೧೯೮೦).

**ನಟರಾಜ**

ಪರಮೇಶ್ವರನ ಪಂಚವಿಂಶತಿ ಲೀಲೆಗಳಲ್ಲಿ ಒಂದಾದ ನಟರಾಜನ ಮೂರ್ತಿಯನ್ನು ಮಾಡುವುದು ಇತರ ಶಿಲ್ಪಗಳಿಗಿಂತ ಸೂಕ್ಷ್ಮವೆನ್ನಬಹುದು. ನಟರಾಜ ಅರ್ಥಾತ್ ನಾಟ್ಯಭಂಗಿಯಲ್ಲಿರುವ ಶಿವನ ಕೈಕಾಲುಗಳ ಅಂತರವು (Distance) ಹೆಚ್ಚಾಗಿದ್ದು ಪರಸ್ಥಳವು (Gap) ಹೆಚ್ಚಿನ ಭಾಗವಾಗಿರುವುದರಿಂದ ವಿಗ್ರಹದ ದೀರ್ಘಬಾಳಿಕೆಗೆ ಧಕ್ಕೆಯಾಗುತ್ತದೆಂದು ಉಬ್ಬು ಶಿಲ್ಪದಂತೆ ಕೆತ್ತನೆ ಮಾಡಿದ್ದೇ ಆದರೇ ನಟರಾಜನ ವೈಶಿಷ್ಟತೆಗೆ ಹೊಂದಿಕೆ ಆಗದೇ ಇತರ ಶಿಲಾ ಶಿಲ್ಪಗಳಂತೆ ಕಂಡುಬರುತ್ತದೆ. ಇದನ್ನರಿತ

ಬಸವಣ್ಣನವರು ಕೃಷ್ಣ ಶಿಲೆಯಲ್ಲಿಯೇ ನಾಲ್ಕು ಕೈಗಳುಳ್ಳ ನಟರಾಜನನ್ನು ತ್ರಿಮಾನದಿಂದಲೂ ದರ್ಶಿಸುವಂತೆ ಮಾಡಿರುವುದೊಂದು ವಿಶೇಷ.

ಕೈ ಕಾಲುಗಳ ಚಲನೆಯಲ್ಲಿ ಎದ್ದು ಕಾಣುವ ಸ್ನಾಯುಗಳ ಏರಿಳಿತಗಳನ್ನು, ಮುಖದಲ್ಲಿ ಮಂದಸ್ಮಿತ ನಗುವಿನೊಡನೆ ಕಾಣುವ ಚಂಚಲ ಕಣ್ಣುಗಳನ್ನು, ಅಪಸ್ಮಾರನನ್ನು ಏಕಪಾದದಲ್ಲಿ ತುಳಿದುನಿಂತ ನಿಲುವಿನ ನಾಟ್ಯಭಂಗಿಯನ್ನು, ಸೊಗಸಾಗಿ ರೂಪಿಸಿದ್ದು ದೇಹದ ಮೈಮಾಟ ನೈಜತೆಯ ಪ್ರತಿರೂಪವೆನಿಸುತ್ತದೆ.

ವಿಗ್ರಹದ ಬಲಗಡೆಯ ಮೇಲ್ಭುಜದ ಹಸ್ತದಲ್ಲಿ ಡಮರುಗ, ಕೆಳಭುಜದ ಹಸ್ತದಲ್ಲಿ ಅಭಯ ಮುದ್ರೆಯನ್ನೊಂದಿದೆ. ಎಡಗಡೆಯ ಮೇಲ್ಭುಜದ ಹಸ್ತದಲ್ಲಿ ಅಗ್ನಿಪಾತ್ರೆಯಿದ್ದರೇ ಕೆಳಭುಜದ ಹಸ್ತ ಆನೆಯ ಸೊಂಡಿಲು ಬಾಗಿದಂತೆ (ಗಜಹಸ್ತ) ಮಾಡಲಾಗಿದೆ.



ನಟರಾಜ – ಹಂಸಬಾವಿಗೆ

ಕೆಳಗೆ ಪದ್ಮಪೀಠವನ್ನು ಮಾಡಿ ಆ ಪೀಠಕ್ಕೆ ವರ್ತುಲಾಕಾರವಾಗಿರುವ ಪ್ರಭಾಮಂಡಲವಿದ್ದು ಅಗ್ನಿಯ ನಾಲಗೆಯಂತೆ ಮಂಡಲದ ಸುತ್ತ ಆವರಿಸಿದೆ. ಮುಖದಲ್ಲಿನ ಕಿವಿಗಳಲ್ಲಿನ ಆಭರಣಗಳು ಒಂದೇ ರೂಪವಾಗಿರದೇ ವ್ಯತ್ಯಾಸಹೊಂದಿದೆ. ಬಲಕಿವಿ ಪುರುಷರ ತೌಲಕದಂತಿದ್ದರೇ ಎಡಕಿವಿಯಲ್ಲಿ ಸ್ತ್ರೀಯರ ಬೆಂಡೋಲೆಯಂತಿದೆ. ಶಿರದಲ್ಲಿ ಬೆಳಗುತ್ತಿರುವ ಅರ್ಧಚಂದ್ರ. ಶಿರದ ಇಕ್ಕೆಡೆಗಳಲ್ಲಿ ಹರಡಿದ ಜಡೆಯನ್ನು ಪ್ರಭಾಮಂಡಲಕ್ಕೆ ಸೇರಿಸಿರುವುದರಿಂದ ಮೂರ್ತಿಯ ಶಿಲ್ಪಕ್ಕೆ ಒಂದು ಬಗೆಯ ಆಧಾರ (support) ಸಿಕ್ಕಿದಂತಾಗಿದೆ. ಹೆಚ್ಚಿನ ಆಭರಣಗಳಿಲ್ಲದ, ನೈಜತೆಯುಳ್ಳ ದೇಹದ ಕೊರಳನ್ನು ಬಳಸಿದ ಸರ್ಪವು ನಟನೆಯ ಚಲನೆಯ ವೇಗಕ್ಕನುಗುಣವಾಗಿ ಚಲನಶೀಲವಾಗಿರುವಂತೆ ಕೆತ್ತನೆ ಮಾಡಲಾಗಿದೆ. ಚಿದಂಬರಂನಲ್ಲಿರುವ (ತಮಿಳನಾಡು) ಆನಂದ ತಾಂಡವವನ್ನೇ ಆಧಾರವಾಗಿಟ್ಟುಕೊಂಡು (ಉಳಿದಂತೆ ಸಂಧ್ಯಾತಾಂಡವ, ಉಮಾತಾಂಡವ, ಗೌರಿತಾಂಡವ, ಕಾಳಿಕಾತಾಂಡವ, ತ್ರಿಪುರತಾಂಡವ, ಸಂಹಾರತಾಂಡವ, ಲಲಿತತಾಂಡವ, ಊರ್ಧ್ವತಾಂಡವ) ಮೂರ್ತಿ ಕೆತ್ತನೆ ಮಾಡಿದ್ದು ನಯಗಾರಿಕೆಯಿಂದ ಹೊಳಪು ಬರುವಂತೆ ಮಾಡಿದ್ದಾರೆ.



ಬ್ರಹ್ಮ

## ಬ್ರಹ್ಮ

ಬ್ರಹ್ಮನನ್ನು ಸೃಷ್ಟಿಕರ್ತನೆಂದು ವೇದಾಗಮಗಳು, ಪುರಾಣಗಳು ಶೃತಪಡಿಸುತ್ತದೆಯಾದರೂ ಬ್ರಹ್ಮನ ಮೂರ್ತಿಗಳಿರುವ ದೇವಾಲಯಗಳು ಅತ್ಯಂತ ವಿರಳವಾಗಿದೆ. ಇದನ್ನು ಗಮನಿಸಿ ಬ್ರಹ್ಮನ ವಿಗ್ರಹವನ್ನು ಮಾಡುವ ಮೂಲಕ ಇದಕ್ಕೊಂದು ರಾಷ್ಟ್ರೀಯ ಪ್ರಶಸ್ತಿ ದೊರಕಿಸಿಕೊಂಡದ್ದು ವಿಶೇಷ.

ಚತುರ್ಮುಖ ಬ್ರಹ್ಮನೆಂದು ಶಾಸ್ತ್ರಪ್ರಣೀತವಿದ್ದರೂ ಶಿಲ್ಪದಲ್ಲಿ ಕಾಣುವುದು ಮೂರು ಮುಖಗಳು ಮಾತ್ರ. ಮುಮ್ಮುಖ ಮತ್ತು ಪಾರ್ಶ್ವ ಮುಖಗಳೆರಡು ಭುಜಕ್ಕೆ ತಾಗಿದಂತಿದ್ದು ಕಿರೀಟವು ಜಟಾಮುಕುಟ ರೂಪದಲ್ಲಿದೆ. ಎಂಟು ಕೈಗಳು ಒಂದೇ ಶರೀರವಿದ್ದು ನಿಂತಂತೆ ಇರುವ ಈ ಮೂರ್ತಿ ಸುತ್ತಲೂ ಪ್ರಭಾವಳಿಯಿದೆ.

ಈ ಪ್ರಭಾವಳಿಯ ತಳಭಾಗದಲ್ಲಿ ಮಕರವ್ಯಾಳಿಯ ಶೈಲಿಯಿದ್ದರೆ ಮೇಲೆ ವ್ಯಾಘ್ರವ್ಯಾಳಿ ಕೆತ್ತನೆ ಮಾಡಿದ್ದು ಇಡೀ ಶಿಲ್ಪಕ್ಕೆ ಎತ್ತರದ ನಿಲುವನ್ನು ತಂದುಕೊಟ್ಟಿದೆ. ಎಡ ಮತ್ತು ಬಲಗಳಲ್ಲಿ ಆಯುಧಗಳನ್ನು ಹಿಡಿದಿರುವ ಹಸ್ತವು ಪ್ರಭಾವಳಿಗೆ ಸ್ಪರ್ಶಿಸಿದಂತೆ ಮಾಡುವ ಮೂಲಕ ವಿಗ್ರಹದ ಸದೃಢತೆಗೆ (support) ಆಧಾರವನ್ನೊದಗಿಸಿದ್ದಾರೆ.

ಶಿಲ್ಪಶಾಸ್ತ್ರದ ಪ್ರಣೀತಿಯಂತೆ ದೇಹದ ಅಳತೆಯನ್ನಿಟ್ಟು ವೈಜಯಂತಿ ಮಾಲೆಯೂ ಸೇರಿದಂತೆ ಆಭರಣ ಕೆತ್ತನೆಯಲ್ಲಿ ಅತ್ಯಂತ ನವಿರುತನವನ್ನು (Delicate Designs) ತಂದಿರುವುದು ಈ ಶಿಲ್ಪದ ವಿಶೇಷ. ಬ್ರಹ್ಮನ ವಾಹನವಾದ ಹಂಸವನ್ನು ಗೌಣವಾಗಿರಿಸುವುದೊಂದು ಕೊರತೆಯಾಗಿ ಕಂಡುಬರುತ್ತದೆ.

## ಲಕ್ಷ್ಮೀ ನರಸಿಂಹ

ವಿಷ್ಣುವಿನ ದಶಾವತಾರಗಳಲ್ಲಿ (ಮತ್ಸ್ಯ, ಕೂರ್ಮ, ವರಾಹ, ವಾಮನ, ನರಸಿಂಹ, ಪರಶುರಾಮ, ರಾಮ, ಬಲಬಧ್ರ, ಶ್ರೀಕೃಷ್ಣ, ಕಲ್ಕಿ) ಒಂದಾದ ನರಸಿಂಹನ ಹುಟ್ಟು ಸಹಜವಾಗಿರದೇ ಕಂಭವನ್ನು ಸೀಳಿ ಉದ್ಭವವಾಗಿ ರಾಕ್ಷಸನಾದ ಹಿರಿಣ್ಯಕಶಿಪುವನ್ನು ಕೊಂದನೆಂದು ಪುರಾಣಗಳು ಹೇಳುವಂತೆ ನರ ಮತ್ತು ಸಿಂಹ ಎರಡರ ಸಮ್ಮಿಶ್ರತೆಯನ್ನು ಕಾಣಬಹುದಾಗಿದೆ.

ಸುಮಾರು ಐದು ವಿಧದಲ್ಲಿ ನರಸಿಂಹನ ರೂಪವನ್ನು ರಚಿಸುತ್ತಾರೆ.

(೧-೨) ಒಂದು ಕಂಭದಿಂದ ಹೊರಬಂದು ರಾಕ್ಷಸನನ್ನು ತನ್ನ ಬಾಹುಗಳಿಂದ ಬಂಧಿಸಿದಂತೆ ಇಲ್ಲವೇ ತನ್ನ ತೊಡೆಯ ಮೇಲೆ ರಾಕ್ಷಸನನ್ನು ಬೀಳಿಸಿಕೊಂಡು ಅವನ ಹೊಟ್ಟೆಯನ್ನು ಬಗೆಯುವಂತೆ ಈ ಸ್ವರೂಪವನ್ನು ಸ್ಥೌಣ ನರಸಿಂಹ ಅನ್ನುತ್ತಾರೆ.



ಲಕ್ಷ್ಮೀ ನರಸಿಂಹ

(೭) ಐದು ಮುಖ ಹತ್ತು ಕೈಗಳು ಒಂದೇ ದೇಹವಿರುವ ಪಂಚಮುಖಿ ನರಸಿಂಹ.

(೮) ಸುದರ್ಶನ ಚಕ್ರದೊಳಗೆ ಯೋಗಾಸನದಲ್ಲಿ ಅಂದರೇ ಮಂಡಿಯ ಕೆಳಗಿನ ಪಾದಗಳು ಪರಸ್ಪರ ವಿರುದ್ಧ ದಿಕ್ಕಿನಲ್ಲಿದ್ದು ಮಡಿಚಿದ ಮಂಡಿಗಳೆರಡನ್ನು ಪಟ್ಟಿಕೆಯಿಂದ ಕಟ್ಟಿದಂತೆ ಇರುವುದು. ನಾಲ್ಕು ಭುಜಗಳುಳ್ಳ ಆ ಮೂರ್ತಿಗೆ ನಾಲ್ಕು ಕೈಗಳಿಗೂ ಸುದರ್ಶನ ಚಕ್ರವನ್ನೇ ನೀಡಿರುವುದು ವಿಶೇಷವೆನಿಸುತ್ತದೆ.

(೯) ಯೋಗನರಸಿಂಹ ಸಹ ಕುಳಿತಂತೆ ಇದ್ದರೂ ಮನಸ್ಸು ಶಾಂತಚಿತ್ತನಾಗಿ ಸುಖಾಸನದಲ್ಲಿ ಕುಳಿತಂತೆ ತೊಡೆಯ ಮೇಲೆ ಲಕ್ಷ್ಮೀ ಹಸನ್ಮುಖಿಯಾಗಿ ಕಮಲವನ್ನು ಕೈಯಲ್ಲಿ ಹಿಡಿದು ಕುಳಿತಂತೆ ಇರುವುದು.

ಬಸವಣ್ಣನವರು ಮಾಡಿರುವ ನರಸಿಂಹನ ಹಲವಾರು ವಿಗ್ರಹಗಳು ಸಹ ಲಕ್ಷ್ಮೀನರಸಿಂಹ ರೂಪದಲ್ಲಿವೆ. ಪೂಜಿಸುವ ಜನ ಉಗ್ರತೆಯನ್ನು ಬಯಸುವುದಿಲ್ಲವಾದ್ದರಿಂದ ಸೌಮ್ಯರೂಪಕ್ಕೆ ಅಗ್ರಸ್ಥಾನ. ಪ್ರಭಾವಳಿ ಮತ್ತು ತಳಪೀಠವಿರುವ ಉಗ್ರರೂಪದ ನರಸಿಂಹನಲ್ಲೂ ಶಾಂತಚಿತ್ತತೆಯನ್ನು ತಂದಿರುವುದು ಶಿಲ್ಪಿಯ ಕೌಶಲ್ಯವನ್ನು ಬಿಂಬಿಸುತ್ತದೆ.



**ಪುಟ್ಟಬರ್ತಿ ಸಾಯಿಬಾಬ – ಅಮೇರಿಕಾ**

**ಕಾಳಿವಿಗ್ರಹ**

ಮೈಸೂರು ಜಿಲ್ಲೆಯ ಪ್ರಸಿದ್ಧ ಯಾತ್ರಾಸ್ಥಳವಾದ ನಂಜನಗೂಡಿಗೆ ಮಾಡಿಕೊಟ್ಟಿರುವ ಕಾಳಿ ಜನಪದ ಶೈಲಿಯದಾಗಿದ್ದು ದೇವಿಯ ರೌದ್ರತೆಯನ್ನು ತೋರುವ ಸಲುವಾಗಿ ಹತ್ತು ಕೈಗಳಿದ್ದು. ಎಲ್ಲವೂ ಮಾರಕಾಸ್ತ್ರಗಳನ್ನು ಹೊಂದಿದೆ. ಗದೆ, ಕತ್ತಿ, ತ್ರಿಶೂಲ, ಮಚ್ಚು, ಚಕ್ರ ಇವು ದೇವಿಯ ಬಲ ಕೈಗಳಲ್ಲಿದ್ದರೆ ಶಂಖ, ಬಿಲ್ಲುಬಾಣ, ರುಂಡ, ಕಪಾಲ, ಗುರಾಣಿ ಇವು ಎಡಕೈಗಳಲ್ಲಿವೆ. ಕೆನ್ನಾಲಿಗೆಯನ್ನೇ ಚಾಚಿ ರುಂಡಮಾಲೆಯನ್ನೇ ಧರಿಸಿ ಸೊಂಟಕ್ಕೆ ಸಹ ರಾಕ್ಷಸರನ್ನು ಕಡಿದ ರುಂಡಗಳನ್ನೇ ಧರಿಸಿ ಅವರುಗಳ ಕೈ ನೇತಾಡುವಂತೆ ಮಾಡಿರುವುದು ಇತರ ವಿಗ್ರಹಗಳಿಗಿಂತ ಭಿನ್ನವಾಗಿದೆ, ಬಲ ಪಾದದಲ್ಲಿ ರಾಕ್ಷಸನ ಎದೆಯನ್ನು ಮೆಟ್ಟಿ ಭಯಂಕರ ರೂಪದಲ್ಲಿ ನರ್ತಿಸುತ್ತಿರುವಳೇನೋ ಎಂಬಂತೆ ಶಿಲ್ಪ ಮಾಡಿದ್ದು ಹೆಚ್ಚಿನ ಕುಶರಿ ಕೆಲಸಕ್ಕೆ ಆಧ್ಯತೆ ನೀಡದೇ ಭಯಂಕರ ರೂಪಕ್ಕೆ ಪ್ರಾಧಾನ್ಯತೆ ನೀಡಿದ್ದಾರೆ.

**ಸತ್ಯ ಸಾಯಿಬಾಬಾ**

ದೇವರ ಇರುವಿಕೆಯನ್ನು ಯಾರು ಕಾಣದಿದ್ದರೂ ಸಾಧುಸಂತರೂ, ಯೋಗಿಗಳು, ಸ್ವಾಮಿಗಳು ಮುಂತಾದವರು ಸಾಮಾನ್ಯ ಜನರ ನಡುವಿನಲ್ಲಿ ಪರಮಾತ್ಮನ ಗುಣಗಾನ ಮಾಡುತ್ತಾ ಇತರರ ದೃಷ್ಟಿಯಲ್ಲಿ ಪೂಜ್ಯರೆನಿಸಿಕೊಳ್ಳುತ್ತಾರೆ. ಕ್ರಮೇಣ ಜನ ಈ ಬೋಧಕರನ್ನೇ ದೇವರನ್ನಾಗಿ ಕಾಣುತ್ತಾರೆ. ದೈವತ್ವದ ಪರಮೋಚ್ಚ ಪಟ್ಟ ದೊರೆಯಲು ಅಹರ್ನಿಸಿ ಶ್ರಮಿಸುತ್ತಾರೆ. ಇದು ಭಾರತೀಯರ ಗುಣಲಕ್ಷಣ. ಈ ಮಾತಿಗೆ ಪೂರಕವಾಗಿ ಅನೇಕ ಸಂತರ ವಿಗ್ರಹಗಳನ್ನು ಸ್ಥಾಪಿಸುತ್ತಿರುವುದು ಎಲ್ಲೆಡೆ ಕಂಡುಬರುವ ಅಂಶ. ಅಂತೆಯೇ ಪುಟ್ಟಬರ್ತಿ ಸಾಯಿಬಾಬ ವಿಗ್ರಹವೊಂದು ಅಮೇರಿಕಾದಲ್ಲಿ ಸ್ಥಾಪನೆಗೊಂಡಿರುವುದು ವಿಶೇಷ.

ಬಸವಣ್ಣನವರು ಮಾಡಿರುವ ಆಳೆತ್ತರದ ಪುಟ್ಟಬರ್ತಿ ಸಾಯಿಬಾಬ ವಿಗ್ರಹದ ತಳ ಪೀಠದಲ್ಲಿನ ಕಮಲದ ಮೇಲೆ ಜನರಿಗೆ ಸಂದೇಶ ಸಾರುವಂತೆ ನೀಳವಾದ ಕಪನಿ ತೊಟ್ಟು ನಿಂತಿರುವಂತಿದ್ದು ಏಳು ಹೆಡೆಯ ಸರ್ಪವೊಂದು ಶಿರಸ್ಸಿನ ಮೇಲ್ಭಾಗದಲ್ಲಿ ಹೆಡೆ ಎತ್ತಿ ನಿಂತಂತೆಯೋ ಇಲ್ಲವೇ ರಕ್ಷಣೆ ನೀಡಿದಂತೆ ಕೆತ್ತಲಾಗಿದೆ. ಮೂರ್ತಿ ಮತ್ತು ಹಾವಿನ ರೂಪದ ಹಿನ್ನೆಲೆಯಲ್ಲಿ ಗೋಡೆಯಂತಿದ್ದು ಒಂದೇ ಕಲ್ಲಿನಿಂದ L shape ನಲ್ಲಿ ಕೆತ್ತಲಾಗಿದೆ. ಗಮನಿಸಬೇಕಾದ ಅಂಶವೆಂದರೇ ಬಸವಣ್ಣನವರು ದೇವತಾ ಶಿಲ್ಪ ರಚನೆಯಲ್ಲಿ ಅಪಾರ ಅನುಭವ ಹೊಂದಿದಂತೆಯೇ ವ್ಯಕ್ತಿಶಿಲ್ಪ ಅಥವಾ ತದ್ರೂಪ ಶಿಲ್ಪ ಮಾಡುವುದರಲ್ಲಿಯೂ ಅವರ ಸಾಧನೆ ಮೇಲುಗೈ ಪಡೆದಿತ್ತು ಎಂಬುದಕ್ಕೆ ಈ ವಿಗ್ರಹ ಪುರಾವೆ ಒದಗಿಸುತ್ತದೆ. ಇದು ಭಾರತದ ಗಡಿ ಗಾಟಿ ಅಮೇರಿಕಾದಲ್ಲಿ ನೆಲೆಗೊಂಡಿರುವುದು ಹೆಮ್ಮೆಯ ಸಂಗತಿ.

**ಸಿಪಾಯಿಗಳು**

ಅರಮನೆಯ ಗೊಂಬೆ ತೊಟ್ಟಿಗೆ ದಸರಾ ಸಂದರ್ಭದಲ್ಲಿ ಲೆಕ್ಕವಿಲ್ಲದಷ್ಟು ಜನ ಬರುತ್ತಿದ್ದರು. ಸ್ವದೇಶಿ ಶಿಲ್ಪಿಗಳಿಂದ ಮಾಡಿಸಿದ್ದ ದಂತ, ಶ್ರೀಗಂಧ, ಕರಿಮರ ಹಾಗೂ ಚಿನ್ನ, ಬೆಳ್ಳಿ ಮತ್ತು ಪಂಚಲೋಹದ ವಿಗ್ರಹಗಳು, ಹಲವು ನಮೂನೆಯ ಪೆಟ್ಟಿಗೆಗಳು, ಹಲವಾರು ಬಗೆಯ ಅಲಂಕಾರಿಕ ಸಾಧನಗಳು ಜೊತೆಗೆ ದೇಶ ವಿದೇಶಗಳಿಂದ ತರಿಸಿದವು ಸೇರಿದಂತೆ ತಮ್ಮಲ್ಲಿ ಅಖಂಡವಾಗಿದ್ದುದನ್ನು ಸಂಗ್ರಹಿಸಿ ಪ್ರದರ್ಶಿಸುತ್ತಿದ್ದವುಗಳಲ್ಲಿ ಮಹಾರಾಜರು ಬಸವಣ್ಣನವರಿಂದ ಮಾಡಿಸಿದ ಶಿಲಾ ಶಿಲ್ಪಗಳು ಎಲ್ಲರ ಗಮನ ಸೆಳೆಯುತ್ತಿದ್ದವು. ಸುಮಾರು ಎರಡೂವರೆ ಅಡಿ ಎತ್ತರದ ಖಾಸ ಸಿಪಾಯಿಗಳ (Personal soldier) ಶಿಲ್ಪಗಳು ಕಾಲ್ಪನಿಕವಾಗಿರದೇ ಮಹಾರಾಜರ ಬಳಿಯಲ್ಲಿದ್ದವರುಗಳ ತದ್ರೂಪ

ಶಿಲ್ಪಗಳನ್ನೇ ಕೆತ್ತಿರುವುದು ಇದರ ವಿಶೇಷ. ಅಂಗರಕ್ಷಕರಾಗಿ ಕೆಲಸ ಮಾಡಿದವರು ಅತ್ಯಂತ ಪ್ರಾಮಾಣಿಕ ದಕ್ಷರಾಗಿ ನಿರ್ವಹಿಸಿದವರಿಗೆ ಮಹಾರಾಜರು 'ನಿನಗೆ ಏನು ಬೇಕು ಕೇಳಿಕೋ' ಎಂದು ಹೇಳಿದಾಗ ಕೆಲವರು 'ಮಹಾಸ್ವಾಮಿ' ತಾವಿಟ್ಟ ಅನ್ನದಿಂದಲೇ ಬದುಕಿದ ಜೀವ. ಇನ್ನೇನು ಬೇಡಿ; ತಮ್ಮ ಜೊತೆಯಲ್ಲಿ ಒಂದು ಫೋಟೋ ತೆಗೆಸಿಕೊಳ್ಳುವ ಅವಕಾಶ ಕೊಡಿ' ಎಂದು ಕೆಲವರು ಕೇಳಿದರೆ ಕೆಲವರು 'ಸತ್ತಮೇಲೂ ಈ ಅರಮನೆ ಕಾಯುತ್ತಿರುವಂತೆ ನನ್ನದೊಂದು ವಿಗ್ರಹ ಮಾಡಿಸಿ' ಎಂದು ಕೇಳಿಕೊಂಡವರೂ ಇದ್ದರು. ಇಂತಹವರ ಸಿಪಾಯಿ ಶಿಲ್ಪಗಳೇ ನಮ್ಮ ಮುಂದೆ ಈಗಲೂ ಅರಮನೆಯೊಳಗಿನ ಪ್ರದರ್ಶನಾಂಗಣದಲ್ಲಿ ಕಾಣಬಹುದು. ಒಬ್ಬ ಸಿಪಾಯಿ ಕೈಯಲ್ಲಿ ಚೌರಿ ಇದ್ದರೇ ಮತ್ತೊಬ್ಬನ ಕೈಯಲ್ಲಿ ಆಳುದ್ದ ಬಡಿಗೆ ಇದ್ದು ಬಡಿಗೆಯ ಮೇಲ್ತುದಿಯಲ್ಲಿ ಕಬ್ಬಿಣದ ಕವಚ ಕಾಣಬಹುದಾಗಿದೆ. ಸಂರಕ್ಷಣೆಗೆ ಇದನ್ನು ಆಯುಧದ ರೀತಿಯಲ್ಲಿ ಬಳಸಲು ಸಹಾಯಕವಾಗುವಂತಿರಬಹುದು. ಧರಿಸಿರುವ ಉಡುಪುಗಳ ಶೈಲಿಯಲ್ಲಿ ವ್ಯತ್ಯಾಸವಿಲ್ಲದೇ ಇದ್ದರೂ ತಲೆಯಲ್ಲಿನ ಪೇಟಗಳು ವ್ಯತ್ಯಯ ಹೊಂದಿವೆ. ಚಪ್ಪಲಿಗಳಿಲ್ಲ. ಬರಿಗಾಲಲ್ಲಿ ನಡೆಯುವಂತೆ ಇರುವುದನ್ನು ಗಮನಿಸಿದಾಗ ಮಹಾರಾಜರ ಖಾಸಗಿ ವಲಯದಲ್ಲಿ ಸದಾ ಅಂಗರಕ್ಷಕರಾಗಿರುವವರಂತೆ ತೋರುತ್ತದೆ.

ಈ ಶಿಲ್ಪಗಳ ಮೂಲಕ ಮಹಾರಾಜರು ಮತ್ತು ರಕ್ಷಕ ಪಡೆಗಳ ಅವಿನಾಭಾವ ಸಂಬಂಧ, ರಾಜರ ಬಗ್ಗೆ ಇದ್ದ ಗೌರವ, ಹೆಚ್ಚಿನದೇನನ್ನು ಬಯಸದೇ ಅನ್ನ ಇಟ್ಟ ಧಣಿಯನ್ನು ಸಂರಕ್ಷಿಸುವ ಗುಣವುಳ್ಳ ಔದಾರ್ಯತನದ ಉನ್ನತ ಸಂದೇಶವನ್ನು ಈ ಶಿಲ್ಪಗಳ ಮೂಲಕ ತಿಳಿಯಬಹುದಾಗಿದೆ.





ಸಿಪಾಯಿಗಳು



ಜ್ಞಾನಚಕ್ರ

**ಜ್ಞಾನಚಕ್ರ**

ಕುವೆಂಪುರವರು ಉಪಕುಲಪತಿಗಳಾಗಿದ್ದ ಸಂದರ್ಭದಲ್ಲಿ ಮೈಸೂರಿನ ವಿಶ್ವವಿದ್ಯಾಲಯದ ಕ್ರಾಫರ್ಡ ಹಾಲ್ ಮುಂಭಾಗದಲ್ಲಿ ಮಾಡಿರುವ ಜ್ಞಾನಚಕ್ರ ಹಲವು ತೆರನಲ್ಲಿ ವಿಶೇಷವೆನಿಸುತ್ತದೆ. ಇದು ಉದ್ಯಾನವನದ ಮಧ್ಯದಲ್ಲಿ ಸ್ಥಾಪಿಸಿದ್ದು ಸುತ್ತಲೂ ನೀರಿನ ತೊಟ್ಟಿ ಕಟ್ಟಿ ವಿದ್ಯುತ್ ಅಳವಡಿಕೆಯಿಂದ ನೀರು ಚಿಮ್ಮುವಂತೆ ಮಾಡಿದ್ದಾರೆ. ಜ್ಞಾನ ಚಕ್ರದ ಮೇಲ್ತುದಿ ತ್ರಿಕೋಣಾಕಾರವಾಗಿರುವಂತೆ ಮಾಡಿ ಮಧ್ಯದಲ್ಲಿ ಉರಿಯುತ್ತಿರುವ ಹಣತೆಯನ್ನು ಮಾಡಿ ಅದರ ಸುತ್ತಲೂ ಮಕರ ವ್ಯಾಳಿಯನ್ನೊಳಗೊಂಡ ಚಿತ್ತಾರಗಳನ್ನು ಬಿಡಿಸಿದ್ದಾರೆ. ಜ್ಞಾನ ಚಕ್ರವು ನಾಲ್ಕು ಸುತ್ತುಗಳ ನಕಾಶೆಯನ್ನು ಹೊಂದಿದ್ದು ಹಾವೊಂದು ಪ್ರಶ್ನಾರ್ಥಕ ಚಿಹ್ನೆಯಂತೆ ರೂಪಗೊಳಿಸಿದ್ದಾರೆ. ಜ್ಞಾನ ಚಕ್ರದ ತಳಪೀಠ ಕಮಲದ ಹೂವಿನಂತೆ ಕೆತ್ತಿರುವುದು ಅದರಡಿಯ ಸುತ್ತಿನಲ್ಲಿ **ಪ್ರಶ್ನೆಯಿಂದ ಆಶ್ಚರ್ಯಕೆ ಆಶ್ಚರ್ಯದಿಂದ ಪ್ರಶ್ನೆಗೆ ಉಭಯ ಮಧ್ಯೆ ಚರಿತೆ ವಿದ್ಯೆ, ಪೂರ್ಣೆ, ಶೂರ್ಣೆ ಕುಂಡಲಿನಿ** ಎಂಬ ವಾಕ್ಯವನ್ನು ಕೆತ್ತಿರುವುದು ಅತ್ಯಂತ ವಿಶೇಷವೆನಿಸುತ್ತದೆ. ಇನ್ನೊಂದು ವಿಶೇಷವೆಂದರೇ ಜ್ಞಾನ ಚಕ್ರದ ಮುಂಬದಿ ಹೇಗೆ ಚಿತ್ತಾರಗೊಳಿಸಿದೆಯೋ ಅದೇ ತೆರನಾಗಿ ಹಿಂಬದಿಯಲ್ಲಿ ಸಹ ಮಾಡಿದ್ದಾರೆ. ಪ್ರಾಯಶಃ ಅವರ ಗುರುವಾದ ಶ್ರೀ ಸಿದ್ಧಲಿಂಗಸ್ವಾಮಿಗಳು ವಿಶ್ವಕರ್ಮ ಮೂರ್ತಿಯನ್ನು ಎರಡು ಕಡೆಯು ಒಂದೇ ತೆರನಾಗಿ ಕಾಣುವಂತೆ ಕೆತ್ತಿರುವುದನ್ನು ಅತ್ಯಂತ ಸನಿಹದಲ್ಲಿ ನೋಡಿ ಕಲಿತುದರ ಪರಿಣಾಮ ಬಸವಣ್ಣನವರಿಗೆ ಗುರುವಿನ ಮಾರ್ಗ ದೊರಕಿದೆ ಎನ್ನಬಹುದು. (ಈ ವಿಶ್ವಕರ್ಮ ಮೂರ್ತಿ ಮೈಸೂರಿನ ಮಂಡಿ ಮೊಹಲ್ಲಾದಲ್ಲಿನ ಕಾಳಿಕಾಂಬ ದೇವಾಲಯದಲ್ಲಿ ಕಾಣಬಹುದು)



ಶಂಕರಾಚಾರ್ಯರು – ಕೊಲ್ಲೂರು ಮೂಕಾಂಬಿಕಾ ದೇವಸ್ಥಾನ

**ಪಂಚಮುಖಿ ಶಿವಲಿಂಗ**

ಸಾಮಾನ್ಯವಾಗಿ ಲಿಂಗವೊಂದೊಡನೆ ಜಲಹರಿ ಇರುವ ಮಧ್ಯದಲ್ಲಿ ಗೋಲಾಕಾರವಾಗಿರುವ ಸ್ಥಾವರ ಲಿಂಗದ ನೆನಪು ಬರುತ್ತದೆ. ಸಾಮಾನ್ಯವಾಗಿ ಎಲ್ಲಾ ಶಿವದೇವಾಲಯಗಳಲ್ಲೂ ಲಿಂಗ ಮತ್ತು ಬಸವನನ್ನು ಸಹ ಕಾಣಬಹುದು. ದೈಹಿಕ ರೂಪವಾಗಿ ಶಿವನನ್ನು ಪೂಜಿಸುವುದಕ್ಕಿಂತ ಲಿಂಗ ರೂಪಿಯಾಗಿ ಪೂಜಿಸುವುದೇ ಹೆಚ್ಚು. ವೀರಶೈವರಂತೂ ಜಲಹರಿ ಇರುವ ಶಿವ ಲಿಂಗದ ಸುತ್ತ ಕಂತೆಯನ್ನು ಬಿಗಿಸಿ ಇಷ್ಟಲಿಂಗದೋಪಾದಿಯಲ್ಲಿ ಎದೆಯ ಮೇಲೆ ಧಾರಣೆ ಮಾಡಿಕೊಳ್ಳುತ್ತಾರೆ. ಪುರಾಣದ ಶಿವನನ್ನು ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನವೆಂಬ ಐದು ಮುಖಗಳಿಂದ ಇರುವಿಕೆಯನ್ನು ಗುರುತಿಸುತ್ತಾರೆ. ಆದರೆ ಈ ಐದು ರೂಪಗಳನ್ನು ಒಂದೇ ಲಿಂಗದಲ್ಲಿ ಅಳವಡಿಸಿರುವುದು ಮಾತ್ರ ಬಸವಣ್ಣನವರ ವಿಶೇಷ ಕೆಲಸ. ಇದು ನೇಪಾಳದಲ್ಲಿರುವ ಪಶುಪತಿ ದೇವಾಲಯದ ಮಾದರಿಯನ್ನು ಅನುಸರಿಸಿದೆ.

ಹಳೆ ದೆಹಲಿಯ ಅಶೋಕ ವಿಹಾರ್‌ಗೆ ಮಾಡಿಕೊಟ್ಟಿರುವ ಈ ಶಿವಲಿಂಗದ ಜಲಹರಿ ಮಧ್ಯದಲ್ಲಿ ಬರುವ ರುದ್ರಭಾಗವೆನ್ನುವ ಗೋಲಾಕಾರದ ಲಿಂಗದ ಸುತ್ತಲೂ ನಾಲ್ಕು ದಿಕ್ಕುಗಳಿಗೆ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮೂರ್ತಿಗಳ ಶಿರಸ್ಸನ್ನು ಮಾಡಿರುವುದು ಶಿರಸ್ಸಿನ ಹಿಂಬದಿ ಲಿಂಗಕ್ಕೆ ಅಂಟಿಕೊಂಡಂತೆಯೂ ಶಿರಸ್ಸಿಗಿಂತ ಸ್ವಲ್ಪ ಎತ್ತರವಾದ ಲಿಂಗದ ಮೇಲೆ ಕೂಡ ಈಶಾನ ಮೂರ್ತಿಯನ್ನು ಕಡೆದಿರುವುದು, ಈ ಐದು ಮೂರ್ತಿಗಳ ಜಟಾಮುಕುಟದಲ್ಲಿ ಸಹ ವೈವಿಧ್ಯತೆಯನ್ನು ತೋರಿಸಿರುವುದು. ಕೊರಳಲ್ಲಿ ಧರಿಸಿರುವ ಹಾವು, ರುದ್ರಾಕ್ಷಿ ಸರ, ಕಿವಿಯಲ್ಲಿನ ಮಕರ ಕುಂಡಲ ಇವೆಲ್ಲವುಗಳಲ್ಲಿ ವೈವಿಧ್ಯತೆಯನ್ನು ಧ್ಯಾನಶ್ಲೋಕದ ಆಧಾರಿತ ರೂಪಿಸಿರುವುದು ವಿಶೇಷವೆನಿಸುತ್ತದೆ. ಶಿಲ್ಪವನ್ನು ಮಾಡುವಾಗ ವಿಷ್ಣುಭಾಗವೆಂದು ಕರೆಯಲ್ಪಡುವ ಜಲಹರಿಯನ್ನು ಒಂದು ಭಾಗ ಮಾಡಿ ರುದ್ರ ಭಾಗವೆಂದು ಕರೆಯುವ ಲಿಂಗವನ್ನು ಪ್ರತ್ಯೇಕ ಮಾಡಿ ಜೋಡಿಸುವ ವಿಧಾನ ಮೊದಲಿನಿಂದಲೂ ಇದೆ. ಬಹುಶಃ ಅದೇ ತೆರನಾಗಿ ಮಾಡಿರಬಹುದಾದ ಈ ಪಂಚಮುಖಿ ಲಿಂಗದ ಕೆತ್ತನೆ ಕೆಲಸ ಉತ್ತಮವಾಗಿದ್ದು ಎಲ್ಲಾ ಮುಖಗಳಲ್ಲಿಯೂ ದಿವ್ಯಕಳೆಯನ್ನು ತಂದಿದ್ದಾರೆ.

# ಶಿಲ್ಪಿ–ಶಿಲೆ–ಕಲ್ಗಣಿ

**ಅನ್ನತೋ ಪ್ರಾಣಃ**
**ಪ್ರಾಣತೋ ಪರಾಕ್ರಮಃ**

ಬದುಕಿಗೆ ಅನ್ನದ ಅವಶ್ಯಕತೆ ಇರುವ ಹಾಗೆ ಶಿಲ್ಪಿಗೆ ಶಿಲೆಯು ಅವಶ್ಯ ಮಾತ್ರವಲ್ಲ, ಬದುಕಿನ ದಾರಿ ಕೂಡಾ. ಅದನ್ನರಿತ ಬಸವಣ್ಣನವರು ಕಲ್ಲು ಸಿಗುವ ಸ್ಥಳವನ್ನು ಗುರ್ತಿಸಿ ಖರೀದಿಸಿದುದುಂಟು. ಇವರು ಶಿಲಾಕೆತ್ತನೆಯಲ್ಲಿ ಪ್ರಾವೀಣ್ಯತೆ ಪಡೆದಿದ್ದಂತೆ ಗಣಿಗಳಲ್ಲಿನ ಕಲ್ಲುಗಳನ್ನು ಗುರುತಿಸುವಿಕೆಯಲ್ಲಿ ಸಹ ನಿಪುಣರಾಗಿದ್ದರು. ಯಾವುದೇ ಒಂದು ಬಗೆಯ ಸಸ್ಯ ಆ ನೆಲದಲ್ಲಿ ಬೆಳೆದುದರ ಜಾಡನ್ನು ಹಿಡಿದು ಅಲ್ಲಿ ಕಲ್ಲು ದೊರೆಯುತ್ತದೆಂಬುದನ್ನು ನಿರ್ಧರಿಸುತ್ತಿದ್ದರು. ಕೆಲವರ ದೃಷ್ಟಿಯಲ್ಲಿ ಇದೊಂದು ಅವೈಜ್ಞಾನಿಕ ದೃಷ್ಟಿ ಎಂದೆನಿಸಿದರೂ ವಾಸ್ತವದಲ್ಲಿ ಅದು ಸತ್ಯವಾದುದೆ. ಇಂತಹವುದಕ್ಕೆ ಮತ್ತೊಂದು ಉದಾಹರಣೆಯೆಂದರೇ ಕೊಳವೆಭಾವಿ (Borewell) ತೋಡಲು ಮೊದಲು ನೀರು ಸಿಗುವ ಸ್ಥಳವನ್ನು ಗುರುತಿಸುವುದಕ್ಕೆ ಅನುಭವಿ ವ್ಯಕ್ತಿಯೋರ್ವನು ತೆಂಗಿನ ಕಾಯೊಂದನ್ನು ಪೂಜಿಸಿ ಎರಡು ಕೈಗಳನ್ನು ಜೋಡಿಸಿ ಅಂಗೈ ಮೇಲೆ ಪ್ರೇಕ್ಷಕರಿಗೆ ಅಭಿಮುಖವಾಗಿ ಕಾಯಿಯ ಜುಟ್ಟು ಬರುವಂತೆ ಅದನ್ನು ಮಲಗಿಸಿ ನಿಗದಿತ ಸ್ಥಳದ ನಾಲ್ಕು ದಿಕ್ಕುಗಳಿಂದ ನಿಧಾನವಾಗಿ ಮಂತ್ರ ಹೇಳುತ್ತಾ ಚಲಿಸಿದರೆ ಆ ಕಾಯಿ ನೀರು ಸಿಗುವ ಸ್ಥಳಕ್ಕೆ ಬಂದಾಗ ಅಂಗೈ ಮೇಲೆ ಮಲಗಿದ್ದ ಕಾಯಿ ನಿಲ್ಲುತ್ತದೆ. ಆ ಸ್ಥಳ ಬಿಟ್ಟು ದೂರ ಕ್ರಮಿಸಿದರೆ ಯಥಾ ರೀತಿ ಮಲಗುತ್ತದೆ. ವೈಜ್ಞಾನಿಕವಾಗಿ ತನಿಖೆ ಮಾಡಿಸಿದರೆ ಅದೇ ಜಾಗದಲ್ಲಿ ಉತ್ತಮ ನೀರು ಸಿಗುತ್ತದೆ. ಇಂತಹ ಅನೇಕ ಉದಾಹರಣೆ ಕೊಡಬಹುದು. ಅನುಭವ ಮೂಲವಾದದ್ದು ಇದು. ಅವರವರು ರೂಢಿಸಿಕೊಂಡ ಸಿದ್ಧಿಯನ್ನವಲಂಬಿಸಿರುತ್ತದೆ. ತಂದೆಯಿಂದ ಮಗನಿಗೆ ಇಲ್ಲವೆ ಗುರುವಿನಿಂದ ಶಿಷ್ಯನಿಗೆ ತಿಳಿಸುವ ಒಂದು ಬಗೆಯ ರಹಸ್ಯ ವಿದ್ಯೆ (Trade Secreat).

ಕಲ್ಲುಗಳ ವಿಚಾರದಲ್ಲಿ ಕಾಶ್ಯಪ ಶಿಲ್ಪಶಾಸ್ತ್ರವು ಬೆಟ್ಟದ ಮೇಲಿನ ಕಲ್ಲು ಉತ್ತಮವೆಂದು, ಭೂಮಿಯೊಳಗೆ ಸಿಗುವ ಕಲ್ಲು ಮಧ್ಯಮವೆಂದು, ಹುತ್ತ, ಸ್ಮಶಾನ, ಗೋರಿ, ದುರ್ಗಂಧ ಯುಕ್ತ ಸ್ಥಳ, ಕೆಸರಿನ ಸ್ಥಳ ಇಂತಹವುಗಳಲ್ಲಿ ದೊರಕುವುದು ತ್ಯಾಜ್ಯವೆಂದು ತಿಳಿಸುತ್ತದೆ.

**ಹರಿತಾ ಕೃಷ್ಣಶಿಲಾಗ್ರಾಹ್ಯ ಸಿತವರ್ಣಾ ವಿಶೇಷತಃ ।**
**ಖರ್ಜೂರ ಪತ್ರ ಸಂಕಾಶಾ ದೂರ್ವಾ ಸ್ತಂಭಾಕೃತಿಃ ಶುಭಾ॥**

ಕಲ್ಲಿನ ಬಣ್ಣಗಳ ಬಗ್ಗೆಯು ತಿಳಿಸುತ್ತಾ ಬಿಳಿಯ ಬಣ್ಣದ ಕಲ್ಲು ದೇವಾಲಯಕ್ಕೆ ಅತ್ಯಂತ ಶ್ರೇಷ್ಠವಾದುದೆಂದು; ಕೆಂಪು, ಹಳದಿ ಮತ್ತು ಕಪ್ಪು ಕಲ್ಲುಗಳು ಉತ್ತಮವೆಂದು ದ್ವಿತೀಯ ಸ್ಥಾನದಲ್ಲಿರಿಸಿದ್ದರೆ; ಮಚ್ಚೆಗಳಿದ್ದು, ಹಲವು ಮಿಶ್ರವರ್ಣಗಳಿಂದ ಕೂಡಿದ್ದರೆ ಅದನ್ನು ರೋಗಗ್ರಸ್ತ ಶಿಲೆಯೆಂದು (ಕಲಂಕಂ ರೋಗ ಜ್ಞೇಯಂ) ತಿಳಿಸುತ್ತವೆ.

ಭೂಗರ್ಭಶಾಸ್ತ್ರಜ್ಞರ ದೃಷ್ಟಿಯಲ್ಲಿ ಗಣಿಗಳಲ್ಲಿನ ಮೇಲ್ಪದರದಲ್ಲಿ ಸಿಗುವ ಕಲ್ಲು ಅವಶ್ಯಕತೆ ಇರುವಷ್ಟು ಪ್ರಮಾಣದಲ್ಲಿ ಸಿಗದಿರುವ ಹಾಗೂ ಪುಡಿ ಪುಡಿಯಾಗುವ ಗುಣವುಳ್ಳದ್ದಾಗಿದ್ದು ಇದನ್ನು ಬೆಂಡು ಬಳಪದ ಕಲ್ಲೆಂದು ಕರೆಯುತ್ತಾರೆ. ಗೃಹೋಪಯೋಗಿ ಸಾಮಾನ್ಯ ಮಟ್ಟದ ಕೆಲಸಗಳಿಗೆ ಇದನ್ನು

ಬಳಸಬಹುದಾಗಿದೆ. ಆದರೆ ಇಪ್ಪತ್ತರಿಂದ ಮೂವತ್ತು ಅಡಿ ಆಳಕ್ಕೆ ಹೋದರೆ ಕಲ್ಲು ಪ್ರಕೃತಿಯಲ್ಲಾಗುವ ಎಲ್ಲಾ ವೈಪರೀತ್ಯಗಳನ್ನು ಅರಗಿಸಿಕೊಂಡು ಗಟ್ಟಿಗೊಂಡ ಕಲ್ಲು ಸಿಗುತ್ತದೆ. ಅದನ್ನೇ Sist ಅಥವಾ Soft Stone ಎಂದು ಕರೆಯುತ್ತಾರೆ. ಇಂತಹ ಕಲ್ಲನ್ನೇ ಕೃಷ್ಣಶಿಲೆಯೆಂದು ಶಿಲ್ಪಿಗಳು ಕರೆದು ಬಳಕೆ ಮಾಡುತ್ತಾರೆ. ಕರ್ನಾಟಕದಲ್ಲಿ ತಯಾರಾಗುತ್ತಿರುವ ಶಿಲ್ಪಗಳಲ್ಲಿ ಅದರಲ್ಲೂ ಹಳೇ ಮೈಸೂರು ಭಾಗದಲ್ಲಿ ನಡೆಯುವ ಎಲ್ಲಾ ಶಿಲಾವಿಗ್ರಹದ ಕೆಲಸಗಳು ಈ ಕೃಷ್ಣಶಿಲೆಯಿಂದಲೇ ಆಗುವಂತಹದಾಗಿದೆ.

ಗಣಿಯೊಳಗಿನಿಂದ ಕತ್ತರಿಸಿ ಹೊರತೆಗೆದ ಮೇಲೆ ಪ್ರಕೃತಿಯ ಎಲ್ಲಾ ಹವಾಗುಣಗಳನ್ನು ತನ್ನೊಳಗೆ ಆವಿರ್ಭವಿಸಿಕೊಂಡು ಮತ್ತಷ್ಟು ದೃಢವಾಗುತ್ತಾ ಹೋಗುತ್ತದೆ. ಈ ಕಲ್ಲಿನಿಂದ ಮಾಡಿರುವ ವಿಗ್ರಹಗಳು ಸಮುದ್ರದ ದಂಡೆಯ ಮೇಲಿದ್ದರೂ ಅಲ್ಲಿನ ಕ್ಷಾರಯುಕ್ತ ಉಪ್ಪಿನ ಗುಣಕ್ಕೆ ಕರಗುವುದಾಗಲೀ ಅಥವಾ ಮಚ್ಚೆಯಂತಹ ಕುಳಿಗಳು ಬೀಳುವುದಾಗಲೀ ಆಗದಿರುವುದನ್ನು ಕಾಣಬಹುದಾಗಿದೆ. ವೃತ್ತಗಳಲ್ಲಿ ನಿಲ್ಲಿಸಿರುವ ಸ್ಮಾರಕವಿಗ್ರಹಗಳು ಚಳಿ, ಮಳೆ, ಗಾಳಿ ದೂಳುಗಳಿಗೆ ಸಿಕ್ಕಿದರೂ ಯಥಾ ಸ್ಥಿತಿಯಲ್ಲಿರುವುದನ್ನು ಕಾಣುತ್ತೇವೆ. (ಮನುಷ್ಯನಿಂದ ಹಾನಿಯಾಗಿರುವುದನ್ನು ಹೊರತುಪಡಿಸಿ) ಅದಕ್ಕಾಗಿಯೇ ಈ ಕಲ್ಲನ್ನು ಭೂಗರ್ಭಶಾಸ್ತ್ರಜ್ಞರು Water proof, Acid proof, Wheather proof, ಎಂದೆಲ್ಲಾ ಸಂಬೋಧಿಸುವುದು ಸಮಯೋಚಿತವೇ ಆಗಿದೆ.


ಕಾವೇರಿ ಮಾತೆ – ಹೇಮಾವತಿ ಅಣೆಕಟ್ಟು

ಶಾಸ್ತ್ರಗಳು ಬಯಲು ಬಂಡೆಯ ಶಿಲ್ಪಗಳು ಅದರಲ್ಲೂ ಬೆಳ್ಳಗಿರುವ ಕಲ್ಲುಗಳು ಅತ್ಯುತ್ತಮವಾದವೆಂದು ಹೇಳಿದರೂ ಅನುಭವಿ ಶಿಲ್ಪಿ ಬಸವಣ್ಣನವರ ದೃಷ್ಟಿಯಲ್ಲಿ ಕೃಷ್ಣ ಶಿಲೆಯೇ ಅತ್ಯುತ್ತಮವಾದುದು. ಗಡಸು ಗುಣವಿಲ್ಲದೇ ಕೊಂಚ ಮೃದುತ್ವವಿರುವುದರಿಂದ ಸೂಕ್ಷ್ಮಾತಿ ಸೂಕ್ಷ್ಮವಾದ ಅಲಂಕಾರಿಕ ಕೆಲಸವನ್ನು ಮಾಡಲು ಸಾಧ್ಯವಾಗುತ್ತದೆ. ಹಾಲು, ಮೊಸರು, ಬೆಣ್ಣೆ, ಎಣ್ಣೆ, ಪಂಚಾಮೃತದಂತಹ ಕ್ಷಾರಗಳಿಂದ ನಿತ್ಯ ಅಭಿಷೇಕ ಮಾಡಿದರೂ ಅದು ಮತ್ತಷ್ಟು ಗಟ್ಟಿಯಾಗುತ್ತದೆಯೇ ವಿನಃ ಅದು ಎಂದೂ ದುರ್ಬಲವಾಗುವುದಿಲ್ಲವೆನ್ನುತ್ತಿದ್ದರು. ಬಸವಣ್ಣನವರು ಶಿಷ್ಯರನ್ನು ಕುರಿತು ಹೇಳುತ್ತಿದ್ದ ಮತ್ತೊಂದು ವಿಷಯವೆಂದರೆ ಭಾರತದಲ್ಲಿ ಸಿಗುವ ಅಮೃತಶಿಲೆಗೂ (Marble), ಇಟಾಲಿಯನ್ ಬಿಳಿ ಶಿಲೆಗೂ ವ್ಯತ್ಯಾಸವಿದೆ. ನಮ್ಮ ದೇಶದ ಕಲ್ಲು ಗಡಸುತನ ಹೆಚ್ಚಾಗಿದ್ದು ಕುಶರಿ ಕೆಲಸಕ್ಕೆ ಬಾರದಂತಹದ್ದು, ಹಾಗೆಯೇ ಇದು ಹೊಳಪುಯುಕ್ತವಾದುದು. ಇಟಾಲಿಯನ್ ಮಾರ್ಬಲ್ ಅಷ್ಟೇನು ಬಿಳುಪಿಲ್ಲದ ನಯಗೆಲಸಕ್ಕೆ ಉತ್ತಮವಾದುದಾಗಿದೆ. ಮೈಸೂರಿನಲ್ಲಿ ಎರಡು ಪ್ರಸಿದ್ಧವಾದ ವೃತ್ತಗಳಿದ್ದು ಅದರಲ್ಲಿನ ಚಾಮರಾಜ ಒಡೆಯರ್ ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಪ್ರತಿಮೆಗಳು ಇದೇ ಕಲ್ಲಿನಿಂದಾದವುಗಳೆನ್ನುತ್ತಿದ್ದರು. ರೋಮ್ ನಗರದಲ್ಲಿನ ಬಹುತೇಕ ಶಿಲ್ಪಗಳು ಜಗತ್ ಪ್ರಸಿದ್ಧಿಯಾಗಿ ಅನೇಕ ಸಂಗ್ರಹಾಲಯಗಳಲ್ಲಿ



**ಸುಬ್ರಹ್ಮಣ್ಯ – ವಲ್ಲಿ – ದೇವಯಾನಿ, ಅನಂತಪುರ**

ಕಾಣಬಹುದಾಗಿದೆ. ನಮ್ಮ ಹಿಂದಿನ ರಾಜಮಹಾರಾಜರುಗಳು ಎಲ್ಲೆಲ್ಲಿ ಕೃಷ್ಣಶಿಲೆಯಂತಹ ಉಪಯುಕ್ತ ಕಲ್ಲುಗಳು ದೊರೆಯುತ್ತಿದ್ದವೋ ಅದರ ಸಮೀಪವೇ ದೇವಾಲಯಗಳನ್ನು ನಿರ್ಮಿಸುತ್ತಿದ್ದುದನ್ನು ಚರಿತ್ರೆಗಳಿಂದ ತಿಳಿಯಬಹುದಾಗಿದೆ. ಉದಾ: ಬೇಲೂರು, ದ್ವಾರಸಮುದ್ರ, ಎಚ್.ಡಿ. ಕೋಟೆ ಸುತ್ತಮುತ್ತಲಿನ ಸ್ಥಳಗಳಲ್ಲಿ ಹೊಯ್ಸಳ ವೈಭವದ ಶಿಲಾದೇಗುಲಗಳು ಇರುವುದು ಪ್ರತ್ಯಕ್ಷ ಸಾಕ್ಷಿಯಾಗಿ ಇಂದಿಗೂ ನಿಂತಿವೆ.

ಕಳೆದ ಎರಡು ಮೂರು ದಶಕಗಳಿಂದೀಚೆಗೆ ಶಿಲ್ಪಿಗಳಿಗೆ ಶಿಲೆ ಸಿಗುವುದೇ ಕಷ್ಟವಾಗಿದೆ. ಚಿನ್ನವಾದರೂ ಸಿಕ್ಕೀತು ನಿರೀಕ್ಷಿತ ಅಳತೆಯ ಕಲ್ಲು ಸಿಗುವುದಿಲ್ಲ ಎಂಬ ಕೊರಗು ಶಿಲ್ಪಿಗಳದ್ದಾಗಿದೆ. ವಿದೇಶಗಳಿಗೆ ರಫ್ತಾಗುತ್ತಿರುವುದರಿಂದ ರಾಷ್ಟ್ರಕ್ಕೆ ಆದಾಯ ಬರುತ್ತದೆಂಬುದೇನೋ ನಿಜ. ಆದರೆ ಇಲ್ಲಿನ ಕಲಾ ಉದ್ಯಮವೇನಾದಿತೆಂಬುದನ್ನು ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಚಿಂತಿಸಬೇಕಾಗಿದೆ. ಕಲ್ಲಿನ ಆ ಗಣಿ ಮಾಲೀಕ ಅಥವಾ ಗುತ್ತಿಗೆದಾರನಿಗೆ ಕೇಳಿದಷ್ಟು ಹಣ ತೆತ್ತು ಅವನು ಯಾವಾಗ ಕೊಡುತ್ತಾನೋ ಎಂದು ಜಾತಕ ಪಕ್ಷಿಯಂತೆ ಕಾಯುತ್ತಾ ಕುಳಿತಿರಬೇಕಾದ ಅನಿವಾರ್ಯತೆ ಇಂದು ಉಲ್ಬಣವಾಗಿದೆ. ಅಲ್ಲಿಯವರೆಗೆ ಗ್ರಾಹಕ ಕಾಯಲಾರದೆ ಕೊಟ್ಟ ಮುಂಗಡ ವಾಪಸ್ಸು ಮಾಡಲು ತಗಾದೆ ತೆಗೆಯುವ ಸಂಭವ ಹೆಚ್ಚಾಗಿದ್ದು ಶಿಲ್ಪಿ ಇತ್ತ ಕಲ್ಲು ಇಲ್ಲದೇ ಅತ್ತ ಗ್ರಾಹಕನು ಇಲ್ಲದೆ ಪರಿಸ್ಥಿತಿಯ ಪ್ರಕೋಪಕ್ಕೆ

ಸಿಕ್ಕಿ ಪರಿತಪಿಸುವಂತಾಗಿದೆ. ಇಂದು ನಿತ್ಯ ಸೇವಿಸುವ ಆಹಾರ ಧಾನ್ಯ, ಧರಿಸುವ ಉಡುಪುಗಳು ವಿದೇಶಿ ಪೇಟೆಂಟ್ ಬಲೆಗೆ ಸಿಕ್ಕಿ ಪರಿತಪಿಸುತ್ತಿರುವಂತೆ ಕಲ್ಲಿಗೂ ಅದೇ ಪರಿಸ್ಥಿತಿ ನಿರ್ಮಾಣವಾಗಿದೆಯೆಂಬುದು ಶೋಚನೀಯ.

ಅರಣ್ಯ ಇಲಾಖೆ ಮತ್ತು ಗಣಿ ಭೂ ವಿಜ್ಞಾನ ಇಲಾಖೆಗಳು ಅಲ್ಪ ಪ್ರಮಾಣದಲ್ಲಾದರೂ ಶಿಲ್ಪಿಗಳಿಗೆ ಕಲ್ಲು ತೆಗೆಯುವ ಗುತ್ತಿಗೆ ನೀಡಬೇಕು. ಇಲ್ಲವೇ ಗುತ್ತಿಗೆದಾರರಿಗೆ ಇಂತಿಷ್ಟು ಪ್ರಮಾಣದಲ್ಲಿ ಶಿಲ್ಪಿಗಳಿಗೆ ನೀಡಿದ ನಂತರವೇ ವಿದೇಶಿ ಮಾರುಕಟ್ಟೆ ಕಡೆ ಗಮನ ಹರಿಸಬೇಕೆಂಬ ಷರತ್ತನ್ನು ವಿಧಿಸಿದಾಗ ಮಾತ್ರ ನಮ್ಮ ಶಿಲ್ಪಕಲೆಗಳು ಬೆಳೆದಾವು. ಅದನ್ನೇ ನೆಚ್ಚಿಕೊಂಡಿರುವ ಶಿಲ್ಪಿಗಳು ಬದುಕುವಂತಾಗುತ್ತಾರೆಂಬುದು ಚಿಂತನಾರ್ಹ ವಿಷಯ. ಅದು ಅಲ್ಲದೇ ಕಲ್ಲು ಅಡಿಯ ಲೆಕ್ಕವಾಗದೆ ತೂಕದ ಲೆಕ್ಕವಾಗಿದೆ. ಅದರಲ್ಲಿ ಪರೆ, ಮಚ್ಚೆ, ಎಳೆ, ಓರೆ ಕೋರೆಗಳು ಇವೇನನ್ನು ನೋಡುವಹಾಗಿಲ್ಲ. ಪುರುಷ, ಸ್ತ್ರೀ ಅಥವಾ ನಪುಂಸಕ ಶಿಲೆಯೇ ಇದು ಎಂದು ಅತಿಯಾಗಿ ಪರೀಕ್ಷಿಸುವಷ್ಟು ಕಾಲ ಗಣಿ ಬಳಿ ಕಲ್ಲು ಇರುವುದಿಲ್ಲ. ಮತ್ತಾವುದೋ ಕಂಪನಿ ಅದನ್ನು ಪಡೆಯಲು ಸಿದ್ಧತೆ ನಡೆಸುತ್ತಿರುತ್ತದೆ. ಇದು ಇಂದಿನ ಪರಿಸ್ಥಿತಿ.

## ಕಾರ್ಯಶೈಲಿ

ಶ್ವೇತ ವಸ್ತ್ರಧಾರಿ ಬಸವಣ್ಣನವರು ಯಾವುದೇ ಹೊಸ ಕೆಲಸ ಆರಂಭಿಸುವ ಪೂರ್ವದಲ್ಲಿ ವಿಶ್ವಕರ್ಮನನ್ನು ನೆನೆದು ವಿಗ್ರಹ ಮಾಡಬೇಕಾದ ದೇವತೆಯ ರೂಪಸ್ವರೂಪಗಳನ್ನು ಮನಸ್ಸಿಗೆ ತಂದುಕೊಂಡು ಕೆಲಸ ಆರಂಭಿಸುತ್ತಿದ್ದರು. ಉದ್ದಗಲ ದಪ್ಪಗಳನ್ನು ನೋಡಿ ಕಲ್ಲಿನ ಅರ್ಧ ಭಾಗವನ್ನು ಗುರ್ತಿಸಿ ಗೆರೆಹಾಕಿ ಪ್ರಭಾವಳಿ ಸಹಿತ ಹೊರಗೆರೆಗಳನ್ನು (outline) ಹಾಕಿಕೊಂಡು ಮಟ್ಟಮಾಡಿ ಪ್ರಾಥಮಿಕವಾಗಿ ಅದರ ಮೇಲೆ ಚಿತ್ರ ಬರೆದು ಅನಾವಶ್ಯಕ ಭಾಗಗಳನ್ನು ತೆಗೆದು ಎಲ್ಲೆಲ್ಲಿ ಇಳಿಸಬೇಕೆಂದು ನಿರ್ಧರಿಸಿ (Stepdown) ದುಬಾರಿ ಹೊಡೆದು ತಪ್ಪು ಒಪ್ಪುಗಳನ್ನು ಪರಿಶೀಲಿಸಿದ ನಂತರವೇ ಅಲಂಕಾರಿಕ ಕೆಲಸಗಳತ್ತ ಗಮನ ಹರಿಸುತ್ತಿದ್ದ ಬಸವಣ್ಣನವರು ಅಂತ್ಯದಲ್ಲಿ ಮುಖದ ಕಳೆಯ ಕಡೆಗೆ ಒತ್ತು ನೀಡಿ ಒಟ್ಟಾರೆ ಸ್ವರೂಪವನ್ನು ಅಂದಗೊಳಿಸುತ್ತಿದ್ದರು. ಉಳಿಸುತ್ತಿಗೆಯನ್ನಿಡಿದ ಆ ಕೈಗಳ ಓಟ ಯಂತ್ರದಂತೆ ಚಲಿಸುತ್ತಿದ್ದ ರೀತಿ ವಿದ್ಯಾರ್ಥಿಗಳಾಗಿದ್ದವರಿಗೆ ಆಶ್ಚರ್ಯ ತರುತ್ತಿದ್ದವು.

ಈಗಿನ ಹಾಗೆ ಅಂದು ಹಲವಾರು ನಮೂನೆಯ ಕತ್ತರಿಸುವ (Cutting Tool), ಕೊರೆಯುವ ರಂಧ್ರವನ್ನಿಕ್ಕುವ (Drilling Machine) ಇಲ್ಲವೇ ಮಸೆಯುವ (Grinding) ಯುಂತ್ರಗಳಾಗಲಿ ಹೆಚ್ಚಿನ ಪ್ರಮಾಣದಲ್ಲಿ ಬಳಕೆಯಲ್ಲಿರಲಿಲ್ಲ (ಬೃಹತ್ ಕೈಗಾರಿಕಾ ಕಾರ್ಖಾನೆಗಳಲ್ಲಿ ಮಾತ್ರ ಬಳಕೆಯಲ್ಲಿತ್ತು). ಉಳಿಸುತ್ತಿಗೆ (Chisel and Hammer) ಎಲ್ಲಾ ಕೆಲಸಗಳಿಗೂ ಬಳಕೆಯಾಗುತ್ತಿತ್ತು. ಉಳಿಯಲ್ಲಾದರೋ ಮಟ್ಟಸವಾದ (Flat Chisel) ಇಲ್ಲವೇ ಮೊನೆ ಉಳಿಯಂತಹವುಗಳೇ ಅಧಿಕವಾಗಿದ್ದು, ಶಿಲ್ಪಿ ತನಗನಿಸಿದಂತೆ ಇಲ್ಲವೇ ಅವಶ್ಯವಿರುವಂತೆ ಅವನೇ ಅದನ್ನು ಸೃಷ್ಟಿಸಿಕೊಳ್ಳಬೇಕಾಗಿತ್ತು. ಈ ಕಾರ್ಯವನ್ನು ಬಹಳ ಅಚ್ಚುಕಟ್ಟಾಗಿ ಕಲಿತಿದ್ದ ಬಸವಣ್ಣನವರು ಕುಲುಮೆ ಹೂಡುವುದು ಕಾಯಿಸಿ ತಟ್ಟುವುದು, ಅದಕ್ಕೆ ಉಕ್ಕಿನ ಶಕ್ತಿ (Temper) ನೀಡುವುದನ್ನು ಚೆನ್ನಾಗಿ ಕಲಿತಿದ್ದರಲ್ಲದೇ ಉಳಿಯ ಬಾಯನ್ನು ವೃತ್ತ, ಅರೆವೃತ್ತ ಇಲ್ಲವೇ ಭಾಗುವಿಕೆ ಇತ್ಯಾದಿ ಕೆಲಸಧಾರಿತವಾಗಿ ಕಾಯಿಸಿ ಹಿಗ್ಗಿಸಿ ಬಗ್ಗಿಸಿ ಸ್ವರೂಪವನ್ನು ನೀಡುತ್ತಿದ್ದರು (Own Manufacture Tools). ಉಳಿಯ ಬಾಯನ್ನು ಚೆನ್ನಾಗಿ ಮಸೆದು ಬ್ಲೇಡಿನ ಮೊನಚಿನಂತೆ ಮಾಡಿ ವಿಗ್ರಹವನ್ನು ನಯಗೊಳಿಸುತ್ತಿದ್ದ ರೀತಿ ಅನನ್ಯ. ಆಗ್ಗೆ ಉಪ್ಪುಕಾಗದದ ಬಳಕೆ (Sand paper) ಕೂಡಾ ಇರಲಿಲ್ಲ. ಮಟ್ಟಸವಾದ ಅರ (Flat Files). ವೃತ್ತ ಮತ್ತು ಅರೆವೃತ್ತದ ಅರಗಳು (Round and half round) ಸೀಮಿತ ಸಂಖ್ಯೆಯಲ್ಲಿ ದೊರೆಯುತ್ತಿದ್ದು ಅವುಗಳಿಂದಲೇ ಸರ್ವಾಂಗ ಸುಂದರಗೊಳಿಸುವ ಅಪಾರ ಶ್ರಮದ ಅಗತ್ಯತೆ ಇತ್ತು.

ಆದರೆ ಇಂದಿನ ತರುಣ ಶಿಲ್ಪಿಗಳಿಗೆ ಅರಗಳಾಗಲಿ, ಹಲವು ಬಗೆಯ ಯಂತ್ರಗಳಾಗಲಿ ಮಾರುಕಟ್ಟೆಯಲ್ಲಿ ದೊರಕುವುದರಿಂದ ಬಹುತೇಕ ಶಿಲ್ಪಿಗಳು ಸ್ವತಂತ್ರವಾಗಿ ಉಳಿಯನ್ನು ಹದಗೊಳಿಸುವ ಕಮ್ಮಾರಿಕೆಯನ್ನು ತಿಳಿಯದವರಾಗಿದ್ದಾರೆಂಬುದು ವಾಸ್ತವ ಸಂಗತಿಯಾಗಿದೆ.

ತರುಣ ವಿದ್ಯಾರ್ಥಿ-ಗಳನ್ನು ಕುರಿತಂತೆ ಕೆಲವು ಕಿವಿಮಾತುಗಳನ್ನು ಹೇಳುತ್ತಿದ್ದರು. ಯಾವುದೇ ವಿಗ್ರಹಗಳನ್ನು ಮಾಡುವಾಗ ಹಿಂಬದಿಯ ಪ್ರಭಾವಳಿ ದಪ್ಪವನ್ನು ಅವಶ್ಯಕತೆಗಿಂತ ಕೊಂಚ ದಪ್ಪವಾಗಿಟ್ಟುಕೊಂಡು ಉಳಿದಂತೆ ದೇಹದ ಉಬ್ಬು ತಗ್ಗುಗಳನ್ನು ವಿಂಗಡಿಸಿ ಒಟ್ಟಾರೆ ವಿಗ್ರಹಕ್ಕೆ ಸೂಕ್ತರೂಪ ಬರುತ್ತದೆಂಬ ಖಾತ್ರಿಯಾದ ನಂತರ ಹಿಂಬದಿಯ ಕಲ್ಲಿನ ದಪ್ಪ ಇಳಿಸುವುದು ಅರ್ಹವೆನಿಸುತ್ತದೆ. ಒಂದು ವೇಳೆ ಕಲ್ಲಿನ ದೋಷದಿಂದಾಗಲೀ ಅಥವಾ ಶಿಲ್ಪಿಯ ಅಚಾತುರ್ಯದಿಂದಾಗಲಿ ಎಲ್ಲಾದರೂ ದೇಹದ ಉಬ್ಬಿದ ಭಾಗಗಳು, ಆಭರಣಗಳು, ಮುಂಚಾಚಿದ ಕೈಗಳು ಅಥವಾ ಪಾದಗಳಲ್ಲಿನ ಕಲ್ಲು ಸಿಡಿದುಹೋದರೆ, ಸಿಡಿದುಹೋದದ್ದು ಅಲ್ಪ ಪ್ರಮಾಣದಲ್ಲಿದ್ದರೆ ಕಲ್ಲನ್ನು ಇಳಿಸಿಕೊಳ್ಳುತ್ತಾ ಆ ದೋಷ ಸರಿಪಡಿಸಬಹುದು. ಆಗ ಪ್ರಭಾವಳಿ ಮತ್ತು ಪೀಠದಲ್ಲಿ ಉಳಿಸಿಕೊಂಡಿರುವ ದಪ್ಪ ಸಹಕಾರಿಯಾಗುತ್ತದೆ. ಒಂದು ವೇಳೆ ಸಿಡಿದ ಕಲ್ಲಿನ ಗಾತ್ರ ಪ್ರಮಾಣ ಅಧಿಕವಾಗಿದ್ದರೆ ಆ ವಿಗ್ರಹವನ್ನು ಪೂರ್ಣಗೊಳಿಸದೆ ತ್ಯಾಜ್ಯ ಮಾಡಿ ಮತ್ತೊಂದು ಮಾಡುವುದೇ ಸೂಕ್ತ. ಪೂಜಾ ಮೂರ್ತಿಗಳಿಗೆ ಭಿನ್ನವಾದುದನ್ನು ಬಳಸಲೇಬಾರದು. ಅಲಂಕಾರಿಕ ಮೂರ್ತಿಗಳಿಗೆ ಶಿಲಾಟಂಕದ ಮೂಲಕ ಭಿನ್ನತೆಯನ್ನು ಹೋಗಲಾಡಿಸಬಹುದಾಗಿದೆ. ಆದರೆ ಶಿಲ್ಪಕಲೆಗೆ ಸಂಬಂಧಿಸಿದಂತೆ ಹಲವಾರು ವಿಷಯಗಳು ಮಾತಿಗೆ ನಿಲುಕದಂತಹವು. ಅವು ಅನುಭವದಿಂದಲೇ ಬರಬೇಕು. ಯಾವ ಯಾವ ಸಂದರ್ಭದಲ್ಲಿ ಏನೇನನ್ನು ಮಾಡಬೇಕೆಂಬುದನ್ನು ಗುರುವಿನಿಂದಲೇ ತಿಳಿಯಬೇಕು. *ಶಿಲ್ಪಿ ಯಾವ ರೀತಿ ಚುರುಕಾಗಿರಬೇಕೆಂದರೆ ಹಾವಿನಂತೆ ಎನ್ನುತ್ತಿದ್ದರು. ಹುತ್ತದೊಳಗೆ ತಲೆಹಾಕಿ ತನ್ನ ಬಾಲವನ್ನು ನಂತರ ಎಳೆದುಕೊಳ್ಳುತ್ತದೆ. ಯಾರಾದರೂ ಬಾಲವೆಂದು ಹಿಡಿಯಲು ಹೋದರೆ ಮೇಲ್ಮುಖವಾಗಿ ತಲೆ ಇಟ್ಟಕೊಂಡಿರುವ ಹಾವು ಕಚ್ಚಿಯೋ ಅಥವಾ ನುಣುಚಿಕೊಂಡೋ ತನ್ನ ತನವನ್ನು ಉಳಿಸಿಕೊಳ್ಳುತ್ತದೆ. ಹಾಗಿರಬೇಕು. ಕೈ ಕೆಲಸ ಎನ್ನುತ್ತಿದ್ದರು. ಪುಸ್ತಕದ ಪಾಠ ಗಿಳಿಪಾಠದಂತಾಗುತ್ತದೆ ಎಂಬುದು ಅವರ ನಿಲುವಾಗಿತ್ತು. ಹಾಗೆಯೇ ವಿಗ್ರಹ ಪೂರ್ಣವಾದ ನಂತರ ಕೊಬ್ಬರಿ ಸುಟ್ಟು ಅದರ ಕಪ್ಪು ಮತ್ತು ಕೊಬ್ಬರಿ ಎಣ್ಣೆ ಮಿಶ್ರಣಮಾಡಿ ಹಚ್ಚಿದರೆ ಕಪ್ಪಾಗುತ್ತದೆ. ಕೃಷ್ಣಶಿಲೆಯಿಂದ ಮಾಡುವ ಪೂಜಾ ವಿಗ್ರಹಕ್ಕಾಗಲೀ ಅಥವಾ ಸೌಂದರ್ಯಕ್ಕಾಗಿ ಇಡುವ ವಿಗ್ರಹಕ್ಕಾಗಲಿ ಕಪ್ಪನ್ನು ಹಚ್ಚುವುದು ಅತ್ಯಾವಶ್ಯಕವೆನ್ನುತ್ತಿದ್ದರು.

ಹೈಟೆಕ್ ಯುಗದಲ್ಲಿ ಕೊಬ್ಬರಿ ಸುಡುವಷ್ಟು ತಾಳ್ಮೆ ಇಲ್ಲದಿರುವುದರಿಂದ ಮಾರುಕಟ್ಟೆಯಲ್ಲಿ ಸಿಗುವ ಪುಡಿಯನ್ನೇ ಎಣ್ಣೆಯಲ್ಲಿ ಬಳಸಿ ಹಚ್ಚುವ ಇಲ್ಲವೆ ಅಧಿಕ ಪ್ರಮಾಣದಲ್ಲಿದ್ದರೆ ಸಿಂಪರಣೆ ಮೂಲಕ (Spray) ಆಧುನಿಕ ತಂತ್ರಜ್ಞಾನ ಬಳಸುವುದು ರೂಢಿಯಲ್ಲಿದೆ.



ಅಕ್ಕಮಹಾದೇವಿ – ಅಕ್ಕನ ಬಳಗ, ಮೈಸೂರು

# ವ್ಯಕ್ತಿತ್ವ

ಬಸವಣ್ಣನವರು ನಾನೋರ್ವ ವಿದ್ಯಾರ್ಥಿಯೆಂದೇ ಭಾವಿಸಿ ಯಾವುದೇ ಪ್ರದರ್ಶನವಾದರೂ ಅಥವಾ ಯಾರಾದರೂ ಹೊಸದನ್ನು ಮಾಡಿದರೆ ನೋಡಿ ಉಭಯಕುಶಲೋಪರಿ ವಿಚಾರಿಸುವ ಗುಣ ಮತ್ತು ಕಲಿಯಲಿಚ್ಛಿಸಿ ಬರುವ ಬಡ ವಿದ್ಯಾರ್ಥಿಗಳಿಗೆ ತಮ್ಮಲ್ಲೇ ಆಶ್ರಯ ನೀಡಿ ಕುಲಕಸಬನ್ನು ಮುಂದುವರೆಸಿ ಎಂದು ಬೆನ್ನು ತಟ್ಟಿ ಪ್ರೋತ್ಸಾಹಿಸುವ ಔದಾರ್ಯ ಅವರದಾಗಿತ್ತು. ಹಾಗೆಯೇ ಕಲಾ ಸಂಬಂಧಿತವಾದದ್ದು ವ್ಯತ್ಯಾಸವಾದರೆ, ಯಾವ ಶಿಲ್ಪಿಗಾದರೂ ಅನ್ಯಾಯವಾದರೆ ಇಲ್ಲವೆ ನಮ್ಮ ಪುರಾತನ ಸ್ಮಾರಕಗಳು ಅವಸಾನ ಹೊಂದುತ್ತಿದ್ದರೆ ಅದನ್ನು ಸರ್ಕಾರದ ಅಥವಾ ಸಂಬಂಧಿಸಿದವರ ಗಮನಕ್ಕೆ ತಂದಾಗಲೇ ಅವರಿಗೆ ಒಂದು ಬಗೆಯ ತೃಪ್ತಿ, ಸಮಾಧಾನ. ಬೇಲೂರು ಹಳೆಬೀಡಿಗೆ ಆಗಾಗ್ಗೆ ಬೇಟಿಕೊಟ್ಟು ಅಲ್ಲಿನ ಕಲಾಸಂಪತ್ತನ್ನು ಗಂಟೆಕಟ್ಟಲೆ ನೋಡಿ ತಮ್ಮ ಅನುಭವಗಳನ್ನು ಹೆಚ್ಚಿಸಿಕೊಳ್ಳುವ ಗುಣ ಅವರಲ್ಲಿತ್ತು. ರಾಜಕೀಯ ವೈಪರೀತ್ಯದಿಂದಲೋ, ಧರ್ಮಾಂಧರ ದುಷ್ಟ ಬುದ್ಧಿಯಿಂದಲೋ ಅಥವಾ ಪ್ರವಾಸಿಗರ ಅವಜ್ಞೆಯಿಂದಲೋ ಅಲ್ಲಿನ ಶಿಲ್ಪಗಳು ಪೂರ್ವಸ್ಥಿತಿಯಲ್ಲಿಲ್ಲ. ಅದನ್ನು ಆ ನೆಲೆಯಲ್ಲಿಯೇ ಅಂದರೆ ಯಥಾ ರೀತಿಯಲ್ಲಿಯೇ ದುರಸ್ತಿ ಏಕೆ ಮಾಡಬಾರದೆಂದು ಮನದಲ್ಲಿ ಚಿಂತಿಸಿ ಪ್ರಯೋಗಾತ್ಮಕವಾಗಿ ತಮ್ಮ ಕಾಶ್ಯಪ ಕಲಾನಿಕೇತನವಾದ ಕರ್ಮ ಭೂಮಿಯಲ್ಲಿ ಮಾಡಿ ಯಶಸ್ಸು ಕಂಡರು. ತೀರಾ ಭಿನ್ನವಾದದನ್ನು ಎಲ್ಲಿ ತೆಗೆಯಬೇಕು, ಹೇಗೆ ಜೋಡಿಸಬೇಕು



ಧ್ಯಾನಾಸಕ್ತ ಬುದ್ಧ – ಮೈಸೂರು


ಕನಕದಾಸರು

ಎಂಬೆಲ್ಲಾ ವಿಚಾರ ಮಂಥನವನ್ನು ತಲೆಯಲ್ಲಿ ತುಂಬಿಕೊಂಡ ಇವರು ಸಂಬಂಧಿಸಿದ ಇಲಾಖೆಗೆ ಪತ್ರ ಬರೆದು ತಮ್ಮ ಪ್ರಯೋಗದ ಸ್ವರೂಪವನ್ನು ತಿಳಿಸಿ ಗಜಸಾಲು, ಬಳ್ಳಿಸಾಲು, ಕುದುರೆಸಾಲು ಇವುಗಳ ಒಂದೊಂದು ನಮೂನೆ ತೋರಿಸಿದರೂ ಫಲಕಾರಿಯಾಗಲಿಲ್ಲ. ಯಾವುದೇ ನಿರ್ಣಯ ತೆಗೆದುಕೊಳ್ಳುವಲ್ಲಿ ಸರ್ಕಾರ ಮತ್ತದರ ಇಲಾಖೆಗಳು ಆಮೆಯ ಚಲನಾ ವೇಗದಲ್ಲಿ ಕೆಲಸಮಾಡುವುದು ಬಸವಣ್ಣನವರಿಗೆ ಹಿಡಿಸುತ್ತಿರಲಿಲ್ಲ. ಇದಕ್ಕಿಂತ ಮಿಗಿಲಾಗಿ ಅಧಿಕಾರಿಗಳ ಮುಂದೆ ದೈನ್ಯತೆಯಿಂದ ನಿಲ್ಲುವುದು, ಅವರ ಮರ್ಜಿಹಿಡಿದು ಕೆಲಸ ಮಾಡುವುದು ಅವರಲ್ಲಿನ ನಿರ್ಭಿಡೆಯ ಗುಣಕ್ಕೆ ದೂರವಾದ ವಿಚಾರವಾಗಿತ್ತು. ಇಂತಹದೇ ಮತ್ತೊಂದು ವಿಚಾರ ಅತ್ಯುನ್ನತ ಖ್ಯಾತ ಶಿಲ್ಪಿಯೋರ್ವರಿಂದ ಧರ್ಮಸ್ಥಳಕ್ಕೆ ಮಾಡಿಸಿದ ಬಾಹುಬಲಿಯ ವಿಗ್ರಹದಲ್ಲಿನ ನ್ಯೂನ್ಯತೆಗಳನ್ನು ತಿಳಿಸಿ ಅದನ್ನು ಸರಿಪಡಿಸಲು ನೀಡಿದ ಸಲಹೆಗಳು, ಹಾಗೆಯೇ ಮತ್ತೊಂದು ಶಾಸ್ತ್ರೋಕ್ತವಾದ ಶಿಲ್ಪಕಲೆಯನ್ನು ಕಲಿಸಿಕೊಡುವ ಕಲಾಶಾಲೆಗಳಿಲ್ಲದಿರುವುದನ್ನು ಸರ್ಕಾರದ ಗಮನಕ್ಕೆ ತಂದದ್ದು ಇವೆಲ್ಲಾ ಅವರಲ್ಲಿನ ಕಾಳಜಿಯನ್ನು ತೋರ್ಪಡಿಸುವುದು. ತತ್ಪರಿಣಾಮ ಮೈಸೂರಿನ ಸರಸ್ವತಿಪುರಂನಲ್ಲಿ ಸುಮಾರು ೧೦೦ X ೮೦ ಅಡಿ ಉದ್ದಗಲದ ನಿವೇಶನ ಅತ್ಯಂತ ತಡವಾಗಿ (೧೯೮೦) ದೊರಕಿದ ನಂತರ ಬಡ ಶಿಲ್ಪಿಗಳಿಗೆ ಉಚಿತ ಸೌಲಭ್ಯಗಳನ್ನು ನೀಡಿ ಕಲ್ಗೆಲಸ ಮಾಡುವುದನ್ನು ಕಲಿಸುವ ಶಾಲೆಯನ್ನಾಗಿ ರೂಪಿಸುತ್ತಾರೆ.

ಶಿಕ್ಷಣ ಇಲಾಖೆ ಮಾತ್ರ ಮಾನ್ಯತೆ ನೀಡಲಿಲ್ಲ. ಕಾಗದ ಪತ್ರಗಳನ್ನಿಡಿದು ಇಲಾಖೆಗೆ ಮೇಲಿಂದ ಮೇಲೆ ಸುತ್ತುವ ಗೋಜಿಗೆ ಹೋಗಲಿಲ್ಲ. ಯಾರು ಸ್ವಯಂ ಉದ್ಯೋಗ ಮಾಡಲಿಚ್ಛಿಸಿ ಕಲಿಯಲು ಬರುತ್ತಾರೋ ಅವರಿಗೆ ಕಲಿಸುವುದಷ್ಟೇ ನನ್ನ ಗುರಿಯೆಂದು ಘಂಟಾಘೋಷವಾಗಿ ತಿಳಿಸಿ ಅವರ ದೇಹಾಂತ್ಯದವರೆಗೂ (೧೯೮೮) ಸತತವಾಗಿ ಶ್ರಮಿಸಿದರು. ತದನಂತರ ಅವರ ಪುತ್ರರು ಮುಂದುವರೆಸುತ್ತಿರುವುದು ಸಂತಸದ ವಿಷಯ.

ಯಾವುದೇ ಕೆಲಸ ಆರಂಭಿಸಲಿ ಶ್ರದ್ಧೆ ಇರಬೇಕು. **'ಶ್ರದ್ಧಾವಾನ್ ಲಭತೆ ಜ್ಞಾನಂ'** ಜೊತೆಗೆ ದೈಹಿಕ ಶಕ್ತಿಯನ್ನು ಕಾಪಾಡಿಕೊಳ್ಳಬೇಕು ಎಂದು ತಮ್ಮ ವಿದ್ಯಾರ್ಥಿಗಳಿಗೆ ತಿಳಿ ಹೇಳುತ್ತಿದ್ದ ಬಸವಣ್ಣನವರು ತಮ್ಮ ನಿತ್ಯಜೀವನದಲ್ಲಿ ಆಚರಿಸಿ ತೋರಿಸುತ್ತಿದ್ದರು. ಮುಂಜಾನೆ ಎದ್ದೊಡನೆಯೇ ಸ್ನಾನ ಧ್ಯಾನಗಳಿಲ್ಲದೆ ಕೆಲಸದ ಕಡೆಗೆ ಗಮನ ಹರಿಸುತ್ತಿರಲಿಲ್ಲ. ಕೆಲಸ ಆರಂಭಿಸುವ ಮುನ್ನ ತಮಗೆ ಕಲೆಯನ್ನು ಹೇಳಿಕೊಟ್ಟ ಗುರುವನ್ನು ಸ್ಮರಿಸಿ ಉಳಿಸುತ್ತಿಗೆಗೆ ನಮಸ್ಕರಿಸಿ, ಕಣ್ಣಿಗೆ ಒತ್ತಿಕೊಂಡು ಕೆಲಸ ಆರಂಭಿಸುತ್ತಿದ್ದ ಇವರು ತಮ್ಮ ಶಿಷ್ಯರು ಯಾರಾದರೂ ಅಥವಾ ಮಕ್ಕಳೇ ಆದರೂ ಸ್ನಾನ ಧ್ಯಾನ ಮಾಡಿ ವಿಭೂತಿದಾರಣೆ ಮಾಡಿಕೊಂಡು ಕೆಲಸಕ್ಕೆ ಬಾರದಿದ್ದರೆ ಅಂದು ಅವರಿಗೆ ಕಾರ್ಯಾಗಾರದ ಬಳಿ ಸೇರಿಸುತ್ತಲೇ ಇರಲಿಲ್ಲವೆಂಬುದು ಮಕ್ಕಳ ಅಂಬೋಣ.



ರಾಷ್ಟ್ರಪ್ರಶಸ್ತಿ ಬಿ. ಬಸವಣ್ಣ ಶಿಲ್ಪಿ

ಸದಾಕಾಲ ಬಿಳಿಯ ಉಡುಪನ್ನೇ ಧರಿಸುತ್ತಿದ್ದ ಇವರು ಕಚ್ಚೆ ಹಾಕಿಕೊಂಡು ಮೇಲೊಂದು ಬಿಳಿಯ ಪಂಚೆಯನ್ನೇ ಹೊದ್ದು ಭಸ್ಮದಾರಣೆ ಮಾಡಿ ಕೆಲಸ ಆರಂಭಿಸಿದರೆ ಕೈಗಳು ಸರಾಗವಾಗಿ ಚಲಿಸತೊಡಗುತ್ತಿದ್ದವು. ಒಂದೊಂದನ್ನು ಚಿಂತಿಸಿ ಹೀಗೆ ಮಾಡಿದರೆ ಹೇಗೆ ಅಥವಾ ಮತ್ತೊಂದು ಬಗೆಯಲ್ಲಿ ಮಾಡಿದರೆ ಹೇಗೆ ಎನ್ನುವ (Trail and error method) ಕ್ರಮವೇ ಇಲ್ಲ. ಮೆಟ್ಟಿ ಕುಳಿತ ಕಲ್ಲಿಗೆ ಒಂದು ರೂಪ ಕೊಡುತ್ತಿದ್ದರು. ಬಿಡುವು ಇದ್ದಾಗಲೆಲ್ಲಾ ಪುಸ್ತಕ ಓದುವ ಅಭ್ಯಾಸವಿರಿಸಿಕೊಂಡಿದ್ದ ಇವರು ಜ್ಯೋತಿಷ್ಯವನ್ನು ತಿಳಿದವರಾಗಿದ್ದರು. ಅಪರೂಪವಾಗಿ ಎಲ್ಲಾದರೂ ಹೋಗಬೇಕಾದ ಸಂದರ್ಭದಲ್ಲಿ ಮಾತ್ರ ನೀಳವಾದ ಕೋಟನ್ನು ಧರಿಸಿ ತೋಳಿಗೆ ಛತ್ರಿ ಹಾಕಿಕೊಂಡು ಅಂಗೈಯಲ್ಲಿ ಒಂದು ಪುಸ್ತಕವನ್ನಿಡಿದು ಹೊರಬರುತ್ತಿದ್ದ ರೀತಿ 'ಪುಸ್ತಕಂ ಹಸ್ತಲಕ್ಷಣಂ' ಎನ್ನುವ ಸಂಸ್ಕೃತೋಕ್ತಿಗೆ. ಅನುಗುಣವಾಗಿದ್ದು ಶಾಲಾ ಮಾಸ್ತರರಂತೆ ಕಳೆಯನ್ನು ಹೊಂದಿ ಬರುತ್ತಿದ್ದ ರೀತಿ ಅನನ್ಯವಾಗಿತ್ತು.

**ಕುಟುಂಬ**

ಶಿಲ್ಪಿ ಬಸವಣ್ಣನವರ ೨೪ನೇ ವಯಸ್ಸಿಗೆ (೧೯೪೫) ಕಂಕಣಬಲ ಕೂಡಿಬಂದುದರಿಂದ ಕನಕಪುರ ತಾಲ್ಲೂಕಿನ ಅಯ್ಯನೂರು ಗೊಲ್ಲಹಳ್ಳಿಯ ಪುಟ್ಟಮ್ಮ ಎಂಬುವರೊಡನೆ ವಿವಾಹವಾಗಿ ಎಂಟು ಮಕ್ಕಳನ್ನು (೫ ಹೆಣ್ಣು, ೩ ಗಂಡು) ಪಡೆದ ತುಂಬು ಸಂಸಾರಿ. ೧೯೫೧ರಿಂದ ಏಳೆಂಟು ವರ್ಷ ರಾಮಾನುಜ ರಸ್ತೆಯ ೧೩ನೇ ಅಡ್ಡರಸ್ತೆಯಲ್ಲಿದ್ದು ನಂತರ ೧೯೫೮ರಿಂದ ತಮ್ಮದೇ ಆದ ಕಶ್ಯಪ ಬ್ರಹ್ಮಶ್ರೀ ಶಿಲ್ಪಕಲಾಶಾಲೆ ಸಂಖ್ಯೆ ೯, ಚಾಮರಾಜ ರಸ್ತೆ, ಮೈಸೂರು–೪. ಇಲ್ಲಿಯೇ ವಾಸವಾಗಿದ್ದು ಅತ್ಯುತ್ತಮ ಶಿಲ್ಪ ಕಲಾ ತಾಣವನ್ನಾಗಿಸಿದರು.

ಬಸವಣ್ಣನವರು ಪ್ರಾರಂಭಿಸಿದ ನಾಮಫಲಕ (Name Plates) ದಂತಹ ಅಪ್ಪಟ ವಾಣಿಜ್ಯ ಕಲೆಯನ್ನು ಇವರ ಎರಡನೆ ಮಗ ಬಿ.ಎಸ್. ಶಿವಶಂಕರ್ ಮುಂದುವರೆಸುತ್ತಿದ್ದರೆ, ಹಿರಿಯ ಮಗ ಬಿ.ಎಸ್. ಯೋಗಿರಾಜ್ ದೇವತಾ ಶಿಲ್ಪ ಮತ್ತು ತದ್ರೂಪ ಶಿಲ್ಪ ಕೆತ್ತನೆಯಲ್ಲಿ ತಂದೆಯಂತೆ ಪ್ರಬುದ್ಧತೆಯನ್ನು ಪಡೆದುಕೊಂಡು ಸರ್ವಾಂಗೀಣ ಕೆಲಸದ ಜವಾಬ್ದಾರಿ ಹೊತ್ತು ಮುನ್ನಡೆಸುತ್ತಿದ್ದರೇ, ಕಿರಿಯ ಪುತ್ರ ಬಿ.ಎಸ್. ನಾಗೇಶ್ವರ ಸಹಾಯಕ ಶಿಲ್ಪಿಯಾಗಿದ್ದಾರೆ. ಯೋಗಿರಾಜ ಅವರ ಹಿರಿಯ ಪುತ್ರ ಸೂರ್ಯಪ್ರಕಾಶ್ ಸಹ ಮೈಸೂರಿನ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಕಲಾ ಕಾಲೇಜಿನಲ್ಲಿ ಪದವಿ ಪಡೆದು (B.F.A.) ಕುಲಕಸುಬನ್ನೆ ಮುಂದುವರೆಸುವ ಮೂಲಕ ಕಶ್ಯಪ ಬ್ರಹ್ಮಶ್ರೀ ಶಿಲ್ಪಕಲಾ ಶಾಲೆ ನಿರಂತರ ಚಟುವಟಿಕಾ ಕೇಂದ್ರವನ್ನಾಗಿಸಿದ್ದಾರೆ.

ಶಿಲ್ಪಿ ಬಸವಣ್ಣನವರು ತಮ್ಮಲ್ಲಿರುವ ಕಲೆಯ ಜೊತೆ ಹೊಲಗದ್ದೆಗಳನ್ನು ಮಾಡಿಕೊಂಡು ತುತ್ತಿನ ಚೀಲಕ್ಕೊಂದು ಮಾರ್ಗ ಮಾಡಿಕೊಂಡಿದ್ದರು. ಬಸವಣ್ಣನವರ ಮಕ್ಕಳುಗಳು ತಂದೆಯ ಜ್ಞಾಪಕಾರ್ಥವಾಗಿ ಮೈಸೂರಿನ ಕುವೆಂಪು ನಗರದಲ್ಲಿರುವ ವಿಶ್ವಕರ್ಮ ವಿದ್ಯಾರ್ಥಿನಿಲಯಕ್ಕೆ ಒಂದು ಕೊಠಡಿಯನ್ನು ಕಟ್ಟಿಸಿಕೊಟ್ಟಿರುವುದಲ್ಲದೆ ದಾಸೋಹಕ್ಕೆ ವಂತಿಗೆಯನ್ನು ನೀಡಿದ್ದಾರೆ. ತಂದೆಯವರು ಜನಿಸಿದ ಊರಿಗೊಂದು ಸಿದ್ಧಪ್ಪಾಜಿ ದೇವಸ್ಥಾನ ಕಟ್ಟಿಸಿಕೊಟ್ಟು ವಿವಿಧ ಧರ್ಮೀಯರು ಪೂಜಿಸಲು ಅನುಕೂಲವಾಗುವಂತೆ ಹಲವಾರು ತೆರನ ಮೂರ್ತಿಗಳನ್ನು ಮಕ್ಕಳುಗಳೇ ಮಾಡಿ ಸ್ಥಾಪನೆ ಮಾಡಿದ್ದಾರೆ (೨೦೦೪). ತಂದೆ

ಶಿಲ್ಪಿ ಬಸವಣ್ಣನವರ ನೆನಪಿನಲ್ಲಿ ಪ್ರತಿ ವರ್ಷ ಯುವ ಶಿಲ್ಪಿಗೆ ಪ್ರಶಸ್ತಿ ನೀಡುವ ಯೋಜನೆ ಹಿರಿಯ ಮಗ ಯೋಗಿರಾಜ ಅವರದಾಗಿದ್ದು, ಕಾರ್ಯಗತವಾಗಬೇಕಾಗಿದೆ!

## ಪ್ರಶಸ್ತಿ-ಪುರಸ್ಕಾರಗಳು

ಯಾವುದೇ ಕಲೆ, ಶಿಲ್ಪ ಮತ್ತಿತರ ಕ್ಷೇತ್ರಗಳಲ್ಲಿ ಸಾಧನೆಗೈದವರಿಗೆ ಸನ್ಮಾನ-ಪ್ರಶಸ್ತಿ ದೊರಕಿದಾಗ ಆಗುವ ಆನಂದ ಅವಿಸ್ಮರಣೀಯವಾಗಿರುತ್ತದೆ. ಇಂತಹವರನ್ನು ಗುರ್ತಿಸುವ ಮೂಲಕ ಆ ಕಲೆಯನ್ನು ಗೌರವಿಸಿದಂತಾಗುತ್ತದೆ.

ಬಸವಣ್ಣನವರು ಮುಷ್ಟಿಯಿಂದ ಹಿಡಿಯಬಹುದಾದ ಶಿಲ್ಪಗಳಿಂದ ಮೂರ್‍ನಾಲ್ಕು ಟನ್ ತೂಕದ ಶಿಲ್ಪಗಳವರೆಗೆ ಮಾಡಿದವು ಅನೇಕ. ಪ್ರತಿ ಶಿಲ್ಪವನ್ನು ಪೂರೈಸಿ ಕೊಟ್ಟಾಗಲೂ ಸನ್ಮಾನಕ್ಕೆ ಕೊರತೆ ಇಲ್ಲ. ಪ್ರಾಯಶಃ ಆ ಪಟ್ಟಿ ಬರೆದರೆ ಎರಡು ಮೂರು ಪುಟವಾದರೂ ಆಗಬಹುದು. ಮುಖ್ಯವಾಗಿ ಹೇಳುವುದಾದರೆ.

(೧) ರಾಷ್ಟ್ರೀಯ ಪ್ರಶಸ್ತಿ ರಾಷ್ಟ್ರಪತಿ ಜ್ಞಾನಿ ಜೈಲ್ ಸಿಂಗ್ ಅವರಿಂದ, ೧೯೮೩

(೨) ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ೧೯೮೨

(೩) ಕ. ಲಲಿತಕಲಾ ಅಕಾಡೆಮಿಯ ೧೯೮೪ರ ವಾರ್ಷಿಕ ಪ್ರಶಸ್ತಿ ನೀಡಿಕೆ, ೧೨-೧-೧೯೮೫.

ಸಿದ್ಧಲಿಂಗ ಸ್ವಾಮಿಗಳ ಗುರುಕುಲದಿಂದ ಹೊರಬಂದು ಸ್ವತಂತ್ರವಾಗಿ ಕಾರ್ಯ ನಿರ್ವಹಿಸಿದಾಗ (೧೯೫೧) ದೊರೆತ ಮೊದಲ ಬಿರುದು 'ಶಿಲ್ಪಕಲಾರತ್ನ'. ಅರಸಿಕೆರೆ ಆರ್ಯ ವೈಶ್ಯ ಮಂಡಲಿಯಿಂದ, ನಂತರ ಶ್ರೀಮನ್ ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಅವರಿಂದ ಗಾಯಿತ್ರಿ ದೇವಸ್ಥಾನದ ಸಕಲ ಶಿಲಾ ಮೂರ್ತಿಗಳನ್ನು ನಿಗದಿತ ಅವಧಿಯೊಳಗೆ ಮಾಡಿಕೊಟ್ಟುದರಿಂದ ನೇತ್ರೋನ್ಮಿಲನ ಸಂದರ್ಭದಲ್ಲಿ ಚಿನ್ನದ ಉಳಿ, ಬೆಳ್ಳಿ ಸುತ್ತಿಗೆ ನೀಡಿ ಬಂಗಾರದ ಸರ ಕೊರಳಿಗೆ ಹಾಕಿ ೫ ಜೊತೆ ಶಾಲನ್ನು ಹೊರಿಸಿ ಅತ್ಯುನ್ನತವಾದ (A' Grade) ಸನ್ಮಾನ ಮಾಡಿದುದು. ಸಿದ್ಧಲಿಂಗ ಸ್ವಾಮಿಗಳ ನಂತರದಲ್ಲಿ ಆ ಬಗೆಯ ಗೌರವಕ್ಕೆ ಪಾತ್ರರಾದವರೆಂದರೆ ಶಿಲ್ಪಿ ಬಸವಣ್ಣನವರು ಮಾತ್ರ (೧೯೫೩).





ಹರಿಹರ ಶಿಲ್ಪ

ಕನಕದಾಸರ ನಾಲ್ಕನೇ ಶತಮಾನೋತ್ಸವ ಸಮಿತಿ (೧೯೬೫), ಮೈಸೂರಿನ ವಿಶ್ವಕರ್ಮ ವಿದ್ಯಾವರ್ಧಕ ಸಂಘ (೧೯೭೯), ಭಾರತೀಯ ಧರ್ಮ ಸಮ್ಮೇಳನ (೧೯೮೫), ಮೈಸೂರಿನ ಕಲಾವಿದ ಕಾಳಪ್ಪನವರು ಸ್ಥಾಪಿಸಿದ 'ಕಲಾನಿಕೇತನ' ಎಂಬ ಚಿತ್ರಕಲಾ ಸಂಸ್ಥೆಯಿಂದ ಗೌರವಾರ್ಪಣೆ, ಬಸವಣ್ಣನವರು ಮಾಡಿದ ಕೆಲವು ಶಿಲ್ಪಗಳ ಪ್ರದರ್ಶನ (೨೬-೫-೧೯೭೪)

ಇವುಗಳಲ್ಲದೇ ಶಿಲ್ಪಕಲಾ ಭೂಷಣ, ಶಿಲ್ಪಕಲಾ ದುರಂಧರ, ಶಿಲ್ಪಕಲಾ ಕುಲತಿಲಕ ಎಂಬಿತ್ಯಾದಿ ಬಿರುದುಗಳಿಗೇನು ಕೊರತೆ ಇಲ್ಲ. ಸ್ವತಂತ್ರವಾಗಿ ಮತ್ತು ಸ್ವಶಕ್ತಿಯಿಂದಲೇ ಬೆಳೆದರು. ಇತರರನ್ನು ಬೆಳೆಸಿದರು.

## ಹೊಯ್ಸಳ ಪ್ರಭಾವ

ಕರ್ನಾಟಕದಲ್ಲಿ ತಯಾರಾಗುತ್ತಿರುವ ಬಹುಪಾಲು ಶಿಲ್ಪಗಳು ಹೊಯ್ಸಳ ಶೈಲಿಯನ್ನೇ ಅನುಸರಿಸಿ ರಚಿಸಿರುವ ಮತ್ತು ರಚಿಸುತ್ತಿರುವ ಶಿಲ್ಪಗಳೇ ಆಗಿವೆ. ಅವೆಷ್ಟು ಆಕರ್ಷಣೆ ಇವೆ ಎಂದರೆ ತರುಣನೋರ್ವನಿಗೆ ದುಂಡಾದ ಮುಖದ, ಉಬ್ಬುಗಲ್ಲದ ಕಿರುನಗೆ ಕಣ್ಸನ್ನೆಯಲ್ಲಿಯೆ ಕಾಮಾಗ್ನಿಯನ್ನು ಪ್ರಚೋದಿಸುವ ಪಾರದರ್ಶಕ ವಸ್ತ್ರವನ್ನುಟ್ಟು, ಕುಂಭಗಳಂತಿರುವ ಸ್ತನದ್ವಯಗಳನ್ನೊತ್ತು ಸಣ್ಣನೆಯ ನಡುವಿನಿಂದ ಬಣ್ಣನೆಯ ಮಾತುಗಳನ್ನಾಡುತ್ತಾ ಕಾಲಂದಿಗೆಯ ಸಪ್ಪಳದೊಡನೆ ಬಂದ ಆ ಸನ್ನಿವೇಶವನ್ನು

ಮರೆಯುವುದುಂಟೆ? ಕಣ್ಣಾಲೆಯಲ್ಲಿ ತುಂಬಿಕೊಂಡು ತನಗಿಚ್ಛೆ ಬಂದಾಗ ತಾನೆಲ್ಲಿದ್ದರೂ ಮನದಲ್ಲಿಯೇ ಆ ದೃಶ್ಯ ತುಂಬಿಕೊಂಡು ಆಲಿಂಗನದ ಅಪ್ಪುಗೆಯಲ್ಲಿ ಒಪ್ಪಿತವಾಗುವಂತೆ ವಿಹರಿಸುವ ಮನೋವ್ಯಾಪಾರದಂತೆ ಶಿಲ್ಪಗಳನ್ನು ಕೆತ್ತಿರುವುದರಿಂದ ಅದು ಹೆಚ್ಚಿನ ಪ್ರಮಾಣದಲ್ಲೇ ಹೋಯ್ಸಳರ ಕಾಲದಲ್ಲಾದುದರಿಂದ ಹೋಯ್ಸಳ ಶೈಲಿಯೆಂದೇ ಕರೆಯಲ್ಪಡುತ್ತದೆ.

ಬಾದಾಮಿ ಚಾಲುಕ್ಯರ ಕಾಲದಲ್ಲಾದ ಐಹೊಳೆ, ಪಟ್ಟದಕಲ್ಲು, ಬಾದಾಮಿಗಳಲ್ಲಿನ ದೇವಾಲಯಗಳು, ರಾಷ್ಟ್ರಕೂಟರ ಗುಹಾಂತರ ದೇವಾಲಯಗಳು, ಚಾವುಂಡರಾಯನ ಕಾಲದ ಶ್ರವಣಬೆಳಗೊಳದಲ್ಲಿನ ಬೃಹತ್ ಗೋಮಟೇಶ್ವರ, ಇವೆಲ್ಲವುಗಳಿಗಿಂತ ಸುಂದರವೆನಿಸುವ ದೈಹಿಕ ಮೈ ಮಾಟವುಳ್ಳ ಅತಿ ಎತ್ತರವಿಲ್ಲದ ಮಧ್ಯಮ ಗಾತ್ರದ ಶಿಲ್ಪವನ್ನು ಕಾಣುವುದು ಹೋಯ್ಸಳ ಶೈಲಿಯಲ್ಲಿ ಮಾತ್ರ.

ಹೋಯ್ಸಳ ಶೈಲಿಯ ಪ್ರತಿಮೆಗಳಲ್ಲಿ ಮೈಮೇಲೆ ವಸ್ತ್ರ ವಿನ್ಯಾಸ ಮಾಡುವುದಕ್ಕಿಂತ ಆಭರಣ ವಿನ್ಯಾಸ ಮಾಡಿರುವುದೇ ಹೆಚ್ಚು. ಕೊರಳು, ಕಂಠ, ಭುಜ, ಬಾಹು, ಕಂಕಳು, ತೋಳು, ಮುಂಗೈ, ಸ್ತನದ್ವಯಗಳನ್ನು ಬಂಧಿಸುವ ಪಟ್ಟಿ, ನಡುವಿನಿಂದ ಮಂಡಿಯವರೆಗೂ ವೈವಿಧ್ಯಮಯ ಆಭರಣಗಳು, ಕಾಲಂದಿಗೆ, ಕಾಲುಂಗುರ, ನಿಂತ ನಿಲುವಿನಲ್ಲಿ ಹಲವು ಬಗೆ (ದ್ವಿಭಂಗ, ತ್ರಿಭಂಗ, ಅತಿಭಂಗ) ಮುಖಕೊಪ್ಪವ ಕಿರೀಟ ಇವೆಲ್ಲವೂ ದೇವತಾಮೂರ್ತಿ ಶಿಲ್ಪಗಳಿಗಾಗಲಿ, ಪರಿವಾರ ದೇವತೆಗಳ ಶಿಲ್ಪಗಳಲ್ಲಾಗಲೀ ಇಂತಹದೇ ಶೈಲಿ ಕಾಣಬಹುದು. ವಿಗ್ರಹಕ್ಕೆ ಪೂರಕವಾದ ಹಿಂಬದಿಯ ಪ್ರಭಾವಳಿ ಸಹ ಸಿಂಹಲಲಾಟ, ಮಕರವ್ಯಾಳಿ ಇವುಗಳ ಜೊತೆಗೆ ಹೂಬಳ್ಳಿಗಳ ಕೆತ್ತನೆ ವಿಗ್ರಹದ ಅಡಿಯಿಂದ ಮುಡಿಯವರೆಗೂ ಕುಶರಿ ಕೆಲಸದ ಮಹಾಪುರವೇ ಹೋಯ್ಸಳ ಶೈಲಿಯ ಪ್ರಧಾನ ಅಂಶ.

ಬೇಲೂರು ಹಳೆಬೀಡುಗಳನ್ನು ನೋಡಿದ ಜನ ಸಹಜವಾಗಿ ಬಯಸುವುದು ಅದೇ ಶೈಲಿಯನ್ನು, ಕೆತ್ತನೆಯನ್ನು ಮಾಡುವ ಶಿಲ್ಪಿಯು ಗ್ರಾಹಕನ ಬೇಡಿಕೆಗನುಗುಣವಾಗಿ ಆ ಶೈಲಿಯನ್ನು ಮೈಗೂಡಿಸಿಕೊಳ್ಳಬೇಕಾದುದು ಅನಿವಾರ್ಯ. ಹಾಗಾಗಿ ಕರ್ನಾಟಕದ ಬಹುಭಾಗವಲ್ಲದೆ ರಾಷ್ಟ್ರದ ಇತರೆಡೆಗಳಲ್ಲಿ ಈ ಶೈಲಿ ಬಯಸುವವರಿದ್ದಾರೆ.

ಹೋಯ್ಸಳ ಶೈಲಿಯ ಪ್ರಮುಖ ವಾಸ್ತು ವಿನ್ಯಾಸವಾದ ನಕ್ಷತ್ರಾಕಾರದ ಕಟ್ಟಡ, ಹೊರ ಭಿತ್ತಿಯಲ್ಲಿ ಒಂದಾದ ಮೇಲೊಂದರಂತೆ ಸಾಲಾಗಿ ಜೋಡಿಸಿದಂತೆ ಕಾಣುವ ಆನೆ, ಕುದುರೆ, ಹಂಸ, ಬಳ್ಳಿ, ಕೆಲವೆಡೆ ಸೈನ್ಯದ ಸಾಲು, ನರ್ತಕಿಯರ ನಟನಾಭಂಗಿಯನ್ನೊಳಗೊಂಡ ಪಟ್ಟಿಕೆಗಳು, ಗೋಡೆಯ ಹೊರ ಮತ್ತು ಒಳಭಾಗದಲ್ಲಿ ಸಣ್ಣ ಸಣ್ಣ ಗೂಡುಗಳನ್ನು ಮಾಡಿ ಅದರೊಳಗೊಂದು ಮೂರ್ತಿಯನ್ನು ಕೂರಿಸಿ ಗೂಡಿಗೆ ಅಂಟಿಕೊಂಡಂತೆ ಒಂದು ಕಿರುಮಂಟಪವನ್ನು ಮಾಡುವ ಶೈಲಿಯಾಗಿದ್ದು ಮಂಟಪದ ಮೇಲ್ಭಾಗದಲ್ಲಿ ಶಿಖರದೋಪಾದಿಯಲ್ಲಿ ಒಂದು ಕಿರು ಕಳಸ, ಅದಕ್ಕೆ ಅಂಟಿಕೊಂಡಂತೆ ಸಿಂಹಲಲಾಟ, ಹೂ ಬಳ್ಳಿಗಳು, ಮಕರವ್ಯಾಳಿಗಳು, ಸುತ್ತಲಿನ ಚೌಕಟ್ಟಿನ ತುಂಬಾ ಚಿತ್ತಾರಗಳು ಇವು ಹೋಯ್ಸಳರ ದೇವಾಲಯದ ವಾಸ್ತು ವೈಭವ. ಕಲ್ಕಂಭಗಳಂತೂ ತಿರುವಣೆಯಲ್ಲಿ ಕಡೆದಂತೆ (Lathe Turning) ಮಾಡಿ ಅದರಲ್ಲಿಯೂ ಶೃಂಗಾರ ಸೌರಭ ಸೂಸುವ ನಲ್ಲೆಯರ ನಾಟ್ಯಲಾಸ್ಯದ ವಿವಿಧ ಭಂಗಿಗಳು ಇಲ್ಲವೇ ಪರಿವಾರ ದೇವತೆಗಳು, ಅಶ್ವಿನಿದೇವತೆಗಳು, ಅಷ್ಟ ದಿಕ್ಪಾಲಕರುಗಳ ಕೆತ್ತನೆಗಳಿವೆ.

ಮೈಸೂರು ಭಾಗದ ಶಿಲ್ಪಿಗಳಿಗಂತೂ ಅರಸಿಕೆರೆ, ಬಸರಾಳು, ನುಗ್ಗೆಹಳ್ಳಿ, ಹೊನ್ನಾವರ ಹುಲ್ಲೇಕೆರೆ, ಜಾವಗಲ್, ನಾಗಲಾಪುರ, ಹೊಸಹೊಳಲು, ಮೊಸಳೆ ಇತ್ಯಾದಿ ಕಡೆಗಳಲ್ಲಿ ಹೋಯ್ಸಳ ಶೈಲಿಯ ದೇವಾಲಯಗಳೇ ಇರುವುದರಿಂದ ಈ ಶೈಲಿ ಮೈಸೂರಿನ ಶಿಲ್ಪಿಗಳಿಗೆ ಪಿತ್ರಾರ್ಜಿತವಾದ ಆಸ್ತಿಯಂತಾಗಿದೆಯೆಂಬುದು ಉತ್ಪ್ರೇಕ್ಷೆ ಮಾತಲ್ಲ.

ಮೈಸೂರಿನ ಒಡೆಯರ ಆಸ್ಥಾನದಲ್ಲಿದ್ದ ಶಿಲ್ಪಿ ಸಿದ್ಧಲಿಂಗ ಸ್ವಾಮಿಗಳು ಸಹ ಇದೇ ಶೈಲಿಯಲ್ಲಿಯೇ ಚಿತ್ರ ರಚಿಸಿರುವುದನ್ನು ಹಾಗೂ ಶಿಲ್ಪಕೆತ್ತನೆ ಮಾಡಿರುವುದನ್ನು ನಿಚ್ಚಳವಾಗಿ ಕಾಣಬಹುದಾಗಿದೆ. ಅವರ ಶಿಷ್ಯರಾದವರು ಸಹ ಅದೇ ಶೈಲಿಯನ್ನನುಸರಿಸುವುದರಲ್ಲಿ ವಿಶೇಷವೇನಿಲ್ಲ. ಬಸವಣ್ಣನವರು ಈ ಮಾತಿಗೆ ಹೊರತಲ್ಲ. ಬಸವಣ್ಣನವರು ಮಾಡಿರುವ ಶಿಲ್ಪಗಳಲ್ಲಿ ಕೆಲವೊಂದು ಸಣ್ಣ ಪುಟ್ಟ ಮಾರ್ಪಾಡುಗಳನ್ನು ಹೊರತುಪಡಿಸಿದರೇ ಎಲ್ಲವೂ ಹೋಯ್ಸಳ ಶೈಲಿಯಲ್ಲಿಯೇ ಇದೆ. ಜೊತೆಗೆ ಹೆಗ್ಗಡದೇವನ ಕೋಟೆ. ಮತ್ತಿತರ ಸ್ಥಳಗಳಲ್ಲಿ ಸಿಗುವ ಕಲ್ಲು ಸಹ ಹೋಯ್ಸಳರು ಬಳಸಿದ ಕೃಷ್ಣಶಿಲೆಯೇ ಆದುದರಿಂದ ಈ ಶೈಲಿಗೆ ಮತ್ತಷ್ಟು ಪುಷ್ಟಿ ನೀಡಿದೆ.

ಇವು ಯಾವುದರಲ್ಲಿಯೂ ನಿಖರವಾಗಿ ಯಾವ ಶಿಲ್ಪಿಯ ಹೆಸರುಗಳಿಲ್ಲದಿರುವುದನ್ನು ನೋಡಿದಾಗ ದೇವಾಲಯದ ಶಿಲ್ಪಗಳು ನಿರ್ದಿಷ್ಟ ವ್ಯಕ್ತಿಯೋರ್ವನಿಂದ ಆಗಿರುವಂತಹದಲ್ಲ. ಹಲವಾರು ಶಿಲ್ಪಿಗಳು ಹಲವು ತೆರನ ಕೆಲಸಗಳನ್ನು ಮಾಡಿ ಒಟ್ಟಾರೇ ಒಂದು ಸ್ವರೂಪವನ್ನು ಮಾಡಿರುವಂತಹದ್ದು (ಮಾಡಿಸಿದಾತನ ಹೆಸರೇ ಪ್ರಮುಖವಾಗಿ ಎಲ್ಲೆಡೆ ಕಂಡುಬರುತ್ತದೆ).



**ಪಾಂಡುರಂಗ, ರುಕ್ಮಾಯಿ – ರಾಜಮಂಡ್ರಿ – ಆಂದ್ರ**

ಹಾಗೆಯೇ ಮೈಸೂರಿನ ಮಹಾರಾಜರಾದ ಶ್ರೀ ಜಯಚಾಮರಾಜ ಒಡೆಯರ ಕಾಲದಲ್ಲಿ ಮಾಡಿರುವ ಕಾಮಕಾಮೇಶ್ವರಿ (ಸ್ಥಾ-೧೯೫೪), ಭುವನೇಶ್ವರಿ (ಸ್ಥಾ-೧೯೫೧) ಮತ್ತು ಗಾಯತ್ರಿ (ಸ್ಥಾ-೧೯೫೩). ದೇವಾಲಯಗಳಲ್ಲಿ ಸಹ ಯಾವ ಶಿಲ್ಪಿಯ ಹೆಸರನ್ನು ಹಾಕದಿರುವುದು ಕಂಡುಬರುವ ಅಂಶ. ಈ ದೇವಾಲಯಗಳಿಗಾಗಿ ಕೆಲಸ ಮಾಡಿರುವ ಪ್ರತಿಯೊಬ್ಬ ಶಿಲ್ಪಿಯು ಬದುಕಿದ್ದಾಗಲೇ ಅಥವಾ ತದನಂತರದ ಪುತ್ರ. ಪೌತ್ರ ಪರಂಪರೆಯಾಗಲಿ ನಾವು ಮಾಡಿದ್ದು ಎಂದು ಹೇಳಿಕೊಳ್ಳುವುದರಲ್ಲಿ ಅತಿಶಯೋಕ್ತಿಯೇನಿಲ್ಲ.

ಭುವನೇಶ್ವರಿ ದೇವಸ್ಥಾನದಲ್ಲಿ ಮೂಲದೇವರಾದ ಭುವನೇಶ್ವರಿ ಅಕ್ಕ ಪಕ್ಕಗಳಲ್ಲಿ ಚಾಮುಂಡೇಶ್ವರಿ, ರಾಜರಾಜೇಶ್ವರಿ ಇವುಗಳನ್ನು ಹೊರತುಪಡಿಸಿ ಉಳಿದಂತೆ ಇಲ್ಲಿಯೂ ಸೂರ್ಯ ಮತ್ತು ಮಹಾವಿಷ್ಣುವಿನ ವಿಗ್ರಹಗಳು ಇವೆ. ದೇವಿಯರನ್ನು ಕಾಯುವ ದ್ವಾರಪಾಲಿಕೆಯರು. ಮೂರುದೇವಿಯರಿಗೂ ೩ ಗೋಪುರ. ಒಂದೊಂದು ಗೋಪುರದಲ್ಲಿಯೂ ೧೬ ವಿಗ್ರಹ (ದಿಕ್ಕಿಗೆ ನಾಲ್ಕರಂತೆ) ಒಟ್ಟು ೪೮ ವಿಗ್ರಹಗಳನ್ನು ಮಾಡಿದ್ದು ಇದೇ ಶೈಲಿಯನ್ನು (Pattern) ಗಾಯತ್ರಿ ದೇವಸ್ಥಾನದಲ್ಲಿಯೂ ಕಾಣಬಹುದಾಗಿದೆ. ವಿಶೇಷವೆಂದರೆ ಭುವನೇಶ್ವರಿ ದೇವಾಲಯಕ್ಕೆ ಮಹಾದ್ವಾರದಲ್ಲೊಂದು ಗೋಪುರವಿದೆ (ಅದೇ ಮಾರ್ಗದಲ್ಲಿರುವ ವರಾಹಸ್ವಾಮಿ ದೇವಾಲಯದ ಮಾದರಿ ಅನುಸರಿಸಿ) ಇದನ್ನು ಹೊರತುಪಡಿಸಿದರೆ ದೇವಸ್ಥಾನದ ವಾಸ್ತು ವಿನ್ಯಾಸ, ವಿಗ್ರಹಗಳು ಒಂದೇ ತೆರನಾಗಿರುವುದು ಕಂಡುಬರುತ್ತದೆ.

**ಪುರಾಣಗಳು-ಪ್ರೇರಣೆ**

ಶಿಲ್ಪಗಳಾಗುವುದಕ್ಕೆ ಮೂಲದ್ರವ್ಯ ಪುರಾಣಗಳು. ಪುರಾಣಗಳಲ್ಲಿನ ಪಾತ್ರಧಾರಿಗಳನ್ನು ಯಾರು ನೋಡಿಲ್ಲ. ಎಲ್ಲವೂ ಕಲ್ಪನೆಯ ಕೂಸು, ವೈರುಧ್ಯವಾದ ವಿಚಾರಗಳು, ನಿತ್ಯಜೀವನದಲ್ಲಿ ನೋಡುವ ಯಾವ ಸಂಸಾರಿಗೂ ಕಡಿಮೆ ಇಲ್ಲದಂತಹ ಈರ್ಶ್ಯೆ, ದ್ವೇಷ, ಅಸೂಯೆ, ಪ್ರಣಯ, ವಿರಹ ಇತ್ಯಾದಿ ಗುಣಗಳು ದೇವತೆಗಳಲ್ಲಿದ್ದವೆಂಬುದನ್ನು ಪುರಾಣಗಳು ಶೃತಪಡಿಸುತ್ತವೆ. ಕೆಲವನ್ನು ಉದಾಹರಿಸುವುದಾದರೇ...

**ವಿಷ್ಣುವಿಗೆ** ೩ ಜನ ಹೆಂಡತಿಯರು **ಲಕ್ಷ್ಮೀ, ಗಂಗೆ, ಸರಸ್ವತಿ** ಗಂಗೆ ಸರಸ್ವತಿಯರು ಜಗಳವಾಡಿಕೊಂಡು ಪರಸ್ಪರ ನದಿಯಾಗೆಂದು ಶಪಿಸಿದುದರ ಪರಿಣಾಮ ಇವರೀರ್ವರು ನದಿಯಾದರು. ಲಕ್ಷ್ಮೀ ಮಾತ್ರ ಉಳಿದು ಕೊಂಡಳು.

ಸರಸ್ವತಿಯು ಮತ್ತೊಂದೆಡೆ ಬ್ರಹ್ಮನ ಮಾನಸ ಕನ್ಯೆಯೆಂದು,
ಕೃಷ್ಣನ ಬಾಯಿಂದ ಹುಟ್ಟಿದವಳೆಂದು,
ದುರ್ಗೆಯ ಮಗಳೆಂದು ಕತೆಗಳಿವೆ.

ಇನ್ನು ಮುಂದುವರೆದು ಬ್ರಹ್ಮನೇ ತಾನು ಸೃಷ್ಟಿಸಿದ ಮಗಳನ್ನೇ ಮದುವೆಯಾದನೆಂದು ಪುರಾಣಗಳು ತಿಳಿಸುತ್ತವೆ (ಮೂರ್ತಿಶಿಲ್ಪಿ ನೆಲೆ ಹಿನ್ನೆಲೆ ಸಾ.ಕೃ.ರಾ., ಪುಟ ೧೪೬)

**ಕೃಷ್ಣನನ್ನು** ಕುರಿತಂತೆ ಅವನ ಹೆಂಡತಿಯರು ಅನೇಕ. ಕೊಳದಲ್ಲಿ ಸ್ನಾನ ಮಾಡುತ್ತಿರುವ ಗೋಪಿಕೆಯರ ಸೀರೆ ಕದ್ದು ನಗ್ನ ದೇಹವನ್ನು ಮರದ ಮೇಲಿಂದ ನೋಡುತ್ತಿದ್ದನೆಂಬ ವಿಚಾರವುಳ್ಳ ಕೃಷ್ಣನನ್ನು ವೈಭವೀಕರಿಸುವ ಪುರಾಣಗಳು ಹಲವಿವೆ.

**ಲಕ್ಷ್ಮಿಯಾದರೋ** ದೇವದಾನವರು ಅಮೃತ ಪಡೆಯಲು ಕ್ಷೀರ ಸಾಗರವನ್ನು ಮಥಿಸಿದಾಗ ಉದ್ಭವಿಸಿದವಳು (ಬ್ರಾಹ್ಮೀಯ ಚಿತ್ರಕರ್ಮ ಶಾಸ್ತ್ರಂ, ಪು. ೪೧೨)

**ದತ್ತಾತ್ರೆಯ**ನಿಗೆ ೩ ತಲೆ (ಬ್ರಹ್ಮ ವಿಷ್ಣು ಈಶ್ವರ ಈ ಮೂವರ ಕಲ್ಪನೆ) ಆರು ತೋಳು ಅವನ ಹತ್ತಿರ ನಾಲ್ಕು ನಾಯಿಗಳು (ನಾಲ್ಕು ವೇದದ ಕಲ್ಪನೆ).

ತೈತ್ತರೀಯ ಅರಣ್ಯಕವು ಹೇಳುವಂತೆ.....

**'ವರಾಹೇನ ಕೃಷ್ಣೇನ ಶತಬಾಹುನಾ ಉದ್ಧೃತಾ'**

(ಬ್ರಾ.ಚಿ.ಕ.ಶಾಸ್ತ್ರಂ, ಪು. ೫೭)

ಕಪ್ಪುವರ್ಣದ ನೂರು ಬಾಹುಗಳುಳ್ಳ ವರಾಹವು ನೀರಿನಲ್ಲಿ ಅಡಗಿದ್ದ ಭೂಮಿಯನ್ನು ಮೇಲಕ್ಕೆ ಎತ್ತಿತು.

ಒಂದು **ವರಾಹ** ಅವತಾರಿಗೆ ೧೦೦ ಕೈಗಳು ಇದ್ದವೆ? ಇರಲು ಸಾಧ್ಯವೇ? ಇದ್ದುದಾದರೇ ಅವುಗಳನ್ನು ಹಿಡಿದಿಟ್ಟುಕೊಳ್ಳುವ ಶಕ್ತಿ ಒಂದೇ ದೇಹ ಎರಡು ಭುಜಗಳಿಗಿತ್ತೆ?

ಹಾಗೆಯೇ ಮತ್ತೊಂದು

**ಪ್ರತಾಪ ರಾಮಮೂರ್ತಿಗೆ** ಒಂದೇ ತಲೆ ಇಪ್ಪತ್ತು ಕೈ. ಒಂದೇ ದೇಹ



**ಕಾಳಿಕಾದೇವಿ – ನಂಜನಗೂಡು**

**ಶರಭೇಷ ಮೂರ್ತಿ** ಹಿರಣ್ಯಕಶಿಪುವನ್ನು ಸಂಹರಿಸಲು ವಿಷ್ಣುವು ನರಸಿಂಹಾವತಾರ ತಾಳಿದ ಕತೆ ಎಲ್ಲರಿಗೂ ಗೊತ್ತು. ನಂತರದ ಕತೆ ಎಲ್ಲೆಡೆ ಗೌಣವಾಗಿಸಿದ್ದಾರೆ ಅಭಿಮಾನಿಗಳು. ಒಮ್ಮೆ ಬಂದ ಕೋಪ ಶಮನವಾಗಬೇಕಾದರೆ ಅರ್ಥಾತ್ ರಕ್ತದೊತ್ತಡ ಕಡಿಮೆಯಾಗಬೇಕಾದರೆ ಮತ್ತೊಂದು ಉಪಾಸ್ಯ ವಸ್ತು ಅಥವಾ ವಿಚಾರಗಳು ತಲೆಗೆ ಹೊಕ್ಕಬೇಕು. ಸುರಾಪಾನಿಗಳಿಗೂ ಸಹ ಅದರ ಅಮಲು ಇಳಿಯಬೇಕಾದರೆ ನಿದ್ರೆಗೆ ಶರಣಾಗಬೇಕು.

ಹೀಗೆ ನರಸಿಂಹನ ಕೋಪದಿಂದ ಜಗತ್ತಿನಲ್ಲಿನ ಇತರರಿಗೆ ಹಾನಿ ಸಂಭವಿಸುವಂತಾದಾಗ ಎಲ್ಲಾ ದೇವತೆಗಳು ಶಿವನನ್ನು ಮೊರೆಹೊಕ್ಕರಂತೆ. ಆಗ ಪರಮೇಶ್ವರನು ಶರಭನ ರೂಪದಲ್ಲಿ ಅಂದರೆ ಎರಡು ತಲೆ ಕಾಳೀ ಮತ್ತು ದುರ್ಗೆಯ ಶಕ್ತಿಯುಳ್ಳ ೨ ರೆಕ್ಕೆ ಸಿಂಹದ ೮ ಕಾಲುಗಳು (ಸಹಜವಾಗಿ ಪ್ರಾಣಿಗೆ ೪ ಕಾಲುಗಳು) ಉದ್ದವಾದ ಬಾಲ. ಚಂದ್ರ, ಸೂರ್ಯ ಅಗ್ನಿಗಳಿಗೆ ಸಂಕೇತವಾಗಿ ೩ ಕಣ್ಣುಗಳು, ಭೈರವ ಇರುವಂತಹ ಹೃದಯ, ಸೊಂಟದ ಮೇಲೆ ಮನುಷ್ಯ ದೇಹ, ಶರಭನ ಮುಖ, ಕೋರೆಹಲ್ಲು ೩೨ ತೋಳುಗಳು ಅವುಗಳಿಗೆ ಹಲವು ವಿಧದ ಮಾರಕಾಸ್ತ್ರಗಳಿಂದ ಕೂಡಿದ ಕೈಗಳು, ಈ ರೂಪದಿಂದ ನರಸಿಂಹನನ್ನು ಸಂಹರಿಸುತ್ತಾನೆ. ಶಾಂತವಾತಾವರಣ ಮೂಡುತ್ತದೆ (ಕಾಶ್ಯಪ ಶಿಲ್ಪ ಶಾಸ್ತ್ರ, ಪು. ೫೮೭).

ನಂತರ ಶರಭೇಷನ ಶಕ್ತಿ ಶಮನಕ್ಕಾಗಿ ಮತ್ತೊಂದು ಕತೆ ಮೈದಾಳುತ್ತದೆ. ಭೈರವ, ಈ ಭೈರವನಲ್ಲಿಯೇ ಉನ್ಮತ್ತ ಭೈರವ, ಚಂಡ ಭೈರವ, ಕ್ರೋಧ ಭೈರವ, ಕಪಾಲ ಭೈರವ, ಅಸಿತಾಂಗ ಭೈರವ, ರುರು ಭೈರವ ಇತ್ಯಾದಿ (ಕಾ.ಶಿ.ಶಾಸ್ತ್ರ., ಪು. ೫೯೫).

**ಮನುಷ್ಯದೇಹ ಪ್ರಾಣಿ ತಲೆ ಕುರಿತ ಕಲ್ಪನೆ ಪುರಾಣಗಳಲ್ಲಿರುವಂತೆ**

**ಹಯಗ್ರೀವ** ಅವತಾರ ಮನುಷ್ಯನ ದೇಹ ಕುದುರೆ ತಲೆ
**ವರಾಹ** ಅವತಾರ ಮನುಷ್ಯನ ದೇಹ ಹಂದಿ ತಲೆ
**ಗರುಡ** ಅವತಾರ ಮನುಷ್ಯನ ದೇಹ ಗರುಡಪಕ್ಷಿ ತಲೆ
**ನರಸಿಂಹ** ಅವತಾರ ಮನುಷ್ಯನ ದೇಹ ಸಿಂಹದ ತಲೆ
**ಆಂಜನೇಯ** ಅವತಾರ ಮನುಷ್ಯನ ದೇಹ ಕೋತಿಯ ತಲೆ
**ವೃಷಭ** ಅವತಾರ ಮನುಷ್ಯನ ದೇಹ ಹಸುವಿನ ತಲೆ

**ಮನುಷ್ಯನ ಮುಖದೊಡನೆ ಪ್ರಾಣಿ ಅಥವಾ ಪಕ್ಷಿ ದೇಹವುಳ್ಳವು**

**ನಾಗದೇವತೆ** ಹಾವಿನ ದೇಹ ಮನುಷ್ಯನ ತಲೆ
**ಮತ್ಸ್ಯಾವತಾರ** ಮೀನಿನ ದೇಹ ಮನುಷ್ಯನ ತಲೆ
**ಕೂರ್ಮಾವತಾರ** ಆಮೆಯ ದೇಹ ಮನುಷ್ಯನ ತಲೆ

**ಕಿನ್ನರ** ಮನುಷ್ಯ ದೇಹ ವಾದ್ಯ ನುಡಿಸುತ್ತಿರುವ ಹಾಗೆ ಪ್ರಶಾಂತತೆಯಿಂದ ಇದ್ದರೆ ಸೊಂಟದಿಂದ ಕೆಳಭಾಗ ಪಕ್ಷಿಯಂತೆ ರೆಕ್ಕೆಗಳಿದ್ದು ಕಾಲುಗಳು ಸಹ ಪಕ್ಷಿಗಳಂತೆಯೇ ಇರುವ ಕಲ್ಪನೆ. (ಬ್ರಾಹ್ಮೀಯ ಚಿತ್ರಕರ್ಮ ಶಾಸ್ತ್ರ, ಪು. ೧೧೬೫)

ಇಂತಹ ಕಲ್ಪನೆಯ ಪುರಾಣಕ್ಕೆ–

ದೇಹದ ಅರ್ಧರ್ಧ ಭಾಗವನ್ನು ಶಿಲ್ಪಿಯು ತನಗನುಕೂಲವಾಗುವಂತೆ ವಿಂಗಡಿಸಿ ಕೆತ್ತನೆ ಮಾಡುತ್ತಾನೆ. ಇಂತಹ ಇನ್ನೂ ಅನೇಕ ಉದಾಹರಣೆ ನೀಡಬಹುದು.

ಹೀಗೆ ವಿಷ್ಣುಪುರಾಣ, ಶಿವಪುರಾಣ, ಪದ್ಮಪುರಾಣ ಸೇರಿದಂತೆ ಅಷ್ಟಾದಶ ಪುರಾಣಗಳು ಮತ್ತವುಗಳಿಗೆ ಉಪಪುರಾಣಗಳು ಸೇರಿ ಅವುಗಳ ಸಂಖ್ಯೆ ಅಧಿಕವಾಗಿ ೩೩ ಕೋಟಿ ದೇವತೆಗಳ ಬೃಹತ್ ಕಲ್ಪನೆ ನಮ್ಮಲ್ಲಿ ಇವೆ. "ಪುರಾನೀಯತೆ ಇತಿ ಪುರಾಣಮ್" ಇದರ ಅರ್ಥವನ್ನು ನಮಗೆ ಕಾಣಿಸಿದ ಹಿಂದಿನ ಕಾಲಕ್ಕೆ ಒಯ್ದು ಶಾಬ್ದಿಕ ರೂಪದಲ್ಲಿ ಕಾಣಿಸುವಂತಾಗಿದೆ ಎನ್ನಬಹುದು. ದೇವರ ಸಂಬಂಧಿತವಾದ ಕತೆಗಳನ್ನು ಹೆಣೆದು ಋಷಿಗಳು ಮತ್ತು ರಾಜರನ್ನು ಪ್ರಮುಖ ಪಾತ್ರಧಾರಿಗಳನ್ನಾಗಿಸಿ ಅವರ ಸುತ್ತ ಧಾರ್ಮಿಕ, ರಾಜಕೀಯ, ಸಾಮಾಜಿಕ ಸ್ಥಿತ್ಯಂತರಗಳೆಲ್ಲವನ್ನು ಅದರೊಳಗೆ ಸೇರಿಸಿ, ಕಾಲದಿಂದ ಕಾಲಕ್ಕೆ ಲಿಖಿತ ರೂಪದಿಂದ ಬಂದ ಪುರಾಣಗಳು ಯಾವುದು ಸರಿ, ಯಾವುದು ಸರಿ ಇಲ್ಲ ಎಂಬ ಜಿಜ್ಞಾಸೆಗೆ ಒಳಪಡುತ್ತದೆ. ವೈದಿಕ ಪುರಾಣಗಳು ಅಧಿಕವಾಗುತ್ತಿರುವುದನ್ನು ಗಮನಿಸಿದ ಜೈನರು ತಮಗೆ ಸರಿದೋರಿದ ದಾರಿಯಲ್ಲಿ ಜೈನ ಪುರಾಣ ರಚಿಸಿದರು. ನಂತರ ವೀರಶೈವ ಪುರಾಣಗಳು ತಲೆ ಎತ್ತಿದವು. ಅವರವರ ಭಾವಕ್ಕೆ ತಕ್ಕಂತೆ ರೂಪಿಸಿದ ಕಾರಣ ಗೊಂದಲದ ಗೂಡಾಗಿವೆ. ಪುರಾಣಗಳ ಮೂಲ ಯಾವುದೆಂಬುದನ್ನು ಅರಿಯುವುದು ಬಹಳ ಕಷ್ಟದ ಕೆಲಸ. **'ಪುರಾಭವಮ್ ಪುರಾಣಮ್'** ಎಂಬ ಮಾತು ಸಹ ಉಂಟು. **'ಪುರಾತನೀಯತೆ ಇತಿ ಪುರಾಣಮ್'** ಎಂಬುದಾಗಿ ಇದರ ವ್ಯುತ್ಪತ್ತಿ ಸಹ ಹೇಳುತ್ತಾರೆ.



ದರ್ಪಣ ಸುಂದರಿ

ಒಟ್ಟಾರೆ ಹೇಳುವುದಾದರೆ ಇಂದಿನ ಕಾಲಮಾನಕ್ಕೆ ಪುರಾಣಗಳ ಮೂಲ ಹುಡುಕುತ್ತಾ ಹೋಗುವುದು ಒಂದು ರೀತಿಯ ಕಾಲಹರಣವೆನ್ನಬಹುದು (Formulation of definition is waste of time). ಆದರೇ ಇಂತಹ ಪುರಾಣಗಳನ್ನೆ ವೈಭವೀಕರಿಸುವ ಒಂದು ಸಮೂಹ ಅದರಡಿಯಲ್ಲಿ ಆಗಮಗಳನ್ನು ಸೃಷ್ಟಿಸಿ ಪೂಜಾದಿಗಳ ವೈವಿಧ್ಯತೆಯನ್ನು ತಮಗನಿಸಿದಂತೆ ಬರೆದು ಅವುಗಳ ಹಿನ್ನೆಲೆಯಲ್ಲಿ ಆಗಮಿಕರು ವಿವಿಧ ದೇವತೆಗಳ ಹೆಸರನ್ನಿಡಿದು ಜನರನ್ನು ಆಕರ್ಷಿಸುವ ವಿಧಾನದಿಂದ ಇಂದು ಪ್ರತಿಮೆ ಪೂಜೆ ಜಾಸ್ತಿಯಾಗುತ್ತಿದೆಯೇ ವಿನಃ ದೇವರ ಪೂಜೆಯಾಗುತ್ತಿಲ್ಲ. ದೇವರನ್ನು ಧ್ಯಾನಿಸುವುದಕ್ಕೆ ಕೆಲ ಸೆಕೆಂಡುಗಳು ಅವಕಾಶವಿಲ್ಲದಂತೆ ಆಗಿದೆ ಎಂಬುದಕ್ಕೆ ಪ್ರತಿಯೊಂದು ದೇವಸ್ಥಾನದಲ್ಲಿ ಹಲವಾರು ಪ್ರತಿಮೆಗಳನ್ನು ಇಟ್ಟು ಅದರದರ ಅರ್ಚಕರು ಬನ್ನಿ ಬನ್ನಿ ಪೂಜೆ ಮಾಡಿಸಿ, ಮಂಗಳಾರತಿ ಪಡೆಯಿರಿ, ತೀರ್ಥ ತೆಗೆದುಕೊಳ್ಳಿ ಎಂದು ಆಹ್ವಾನಿಸುವ ಮೂಲಕ ಒಂದು ಘಳಿಗೆಯಾದರೂ ನಿಶ್ಚಿಂತೆಯಿಂದ ಧ್ಯಾನ ಮಾಡಲಾಗುತ್ತಿಲ್ಲ ಎಂಬ ವಿಚಾರವಾದಿಗಳ ಅನಿಸಿಕೆಯೊಡನೆ, ಹಿಂದುಗಳ ಸಂಘಟನೆ ಆಗದಿರುವುದಕ್ಕೆ ಹಲವು ಮೂರ್ತಿಗಳ ಪೂಜೆಯು ಒಂದು ಕಾರಣ ಎಂಬುದನ್ನು ಪ್ರಸ್ತಾಪಿಸುತ್ತಾರಾದರೂ ನಮ್ಮ ದೇವಾಲಯಗಳು ಹಲವು ಮೂರ್ತಿಗಳ ಪ್ರದರ್ಶನಾಲಯ (Show Room)ವಾಗಿ ರೂಪುಗೊಳ್ಳುವ ಮೂಲಕ ಹೆಚ್ಚೆಚ್ಚು ಮೂರ್ತಿಗಳನ್ನು ಕಟೆಯುವುದಕ್ಕೆ ಪುಷ್ಟಿ ನೀಡಿದಂತಾಗುತ್ತಿದೆ. ಕಲೆ ಬೆಳೆಯುತ್ತಿದೆ. ಶಿಲ್ಪಿಯು ಬೆಳೆಯಲು ಅವಕಾಶವಾಗುತ್ತಿದೆ. ಇದರಿಂದ ಇನ್ನಿತರ ಲಲಿತಕಲೆಗಳಿಗೆ ತುಂಬಾ ಪ್ರೋತ್ಸಾಹಕವಾಗಿದೆ. ಪುರಾಣಗಳಿಂದ ಮನರಂಜನೆಗೂ ವಿಪುಲ ಅವಕಾಶವಾಗಿದೆ.

ಇನ್ನೊಂದು ಗಮನಿಸಬೇಕಾದ ಅಂಶವೆಂದರೇ ಜಗತ್ ಸೃಷ್ಟಿಕರ್ತನಾದ ಬ್ರಹ್ಮನನ್ನೇ ಕಡೆಗಣಿಸುವಂತೆ ಪುರಾಣ ಸೃಷ್ಟಿಸುವ ಮೂಲಕ ಜಗತ್ತಿನ ಜನರಿಗೆ ಹೆತ್ತ ತಂದೆ ತಾಯಿಯನ್ನೇ ದೂರವಿಡಿ ಎಂಬ ಸಂದೇಶವನ್ನು ಮಕ್ಕಳಿಗೆ ರವಾನಿಸಿದಂತಾಗಿದೆ ಎನ್ನಬಹುದು. (ಅದಕ್ಕಾಗಿಯೋ ಏನೋ ತಂದೆ ತಾಯಂದರಿಗೆ ವಯಸ್ಸಾದ ಕಾಲದಲ್ಲಿ ವೃದ್ಧಾಶ್ರಮ ಇಲ್ಲವೆ ಶುಶ್ರೂಷಾ ಕೇಂದ್ರ ಅವಶ್ಯವಾಗುತ್ತಿರುವುದು).

ಈ ಸಂದರ್ಭದಲ್ಲಿ ಒಂದು ಕವನ ನೆನಪಿಗೆ ಬರುತ್ತದೆ–

ಎಲ್ಲೆಲ್ಲಿ ನೋಡಿದರಲ್ಲಲ್ಲಿ ಪ್ರತಿಮೆ ಸ್ಥಾಪನೆ
ಉದರ ನಿಮಿತ್ತ ಕೊಟ್ಟಷ್ಟಕ್ಕೆ ಶಿಲ್ಪಿ ಮಾಡುವನು ಸುಮ್ಮನೆ
ಅವುಗಳಲ್ಲೆಲ್ಲಾ ಕಾಣ್ಬುದು ಒಂದೇ ನಮೂನೆ
ಅದೇ ಆಭರಣ ಕಿರೀಟ ಮುಖ, ಮೈಮಾಟ ಕಪ್ಪನೆ
ಮಾಡಿಸುವಾತಂಗೆ ಜಾಗ ಲಪಟಾಯಿಸುವ ಇಲ್ಲವೇ ಕೀರ್ತಿಯ ಕಾಮನೆ
ಭಕ್ತನಾಗಿ ಬಂದ ಭಾವುಕ ಕೈಲಿದ್ದುದನ್ನು ಕೊಟ್ಟು ಸಾಗುವನು ಗಮ್ಮನೆ
ಅರ್ಚಕ ಮಂಗಳಾರತಿ ಮುಂದಿಡಿದು ತಟ್ಟೆಕಾಸನು ಮಾಡುವನು ಗುಳುಮ್ಮನೆ
ಮೂರ್ತಿ ಕಡೆದ ಶಿಲ್ಪಿಗೆ ಗರ್ಭಗುಡಿಯೊಳಕ್ಕೋಗದಂತೆ ಅರ್ಚಕನಚ್ಚುವನು ಕದ ಸಕ್ಕನೆ
ಅದರರ್ಥ ಕೇಳಲೂ ಬೇಡಿ ಹೇಳಲೂ ಬೇಡಿ ತೆಪ್ಪಗೆ ಸುಮ್ಮನಿರಿ ಗುಮ್ಮನೆ

ಈ ಸಾಮಾಜಿಕ ಸ್ಥಿತ್ಯಂತರದೊಡನೆ ಪುರಾಣಗಳ ತುಲನೆ ಮಾಡುವುದು ಬೌದ್ಧಿಕ ಪ್ರಭುತ್ವ ಹೊಂದಿದೆಯಾದರೂ ಪುರಾಣ ಕತೆಗಳು ಭಾರತಾದ್ಯಂತ ಇರುವ ಎಲ್ಲಾ ದೇವಾಲಯಗಳ ನಿರ್ಮಾಣಕ್ಕೆ ಕಾರಣವಾಗಿವೆ. ಕಲೆ ಶಿಲ್ಪಾದಿಗಳು ಹೊರಹೊಮ್ಮಲು ಸಹಾಯಕವಾಗಿವೆ. ಅದುವೇ ನಮ್ಮ ಸಂಸ್ಕೃತಿಯಾಗಿದೆ. ಶಿಲ್ಪಶಾಸ್ತ್ರ ಸಂಹಿತೆಯ ಆದಾರ ಧ್ಯಾನ ಶ್ಲೋಕದಂತೆ ಮೂಲ ವಿಗ್ರಹಗಳನ್ನು ಮಾಡಿರುವುದಲ್ಲದೇ ಪುರಾಣಗಳನ್ನೇ ಆದರಿಸಿ ಶಿಲ್ಪ ಮಾಡಿರುವುದನ್ನು ಎಲ್ಲಾ ಕಡೆ ಕಾಣಬಹುದು. ಶಿಲ್ಪಿ ಬಸವಣ್ಣನವರು ಸಹ ಪುರಾಣ ಕತೆಗಳನ್ನೇ ಆಧರಿಸಿ ತಮ್ಮ ಕಲಾಕೌಶಲ್ಯದ ಮೂಲಕ ಅತ್ಯುನ್ನತ ಮೂರ್ತಿಗಳನ್ನು ಕೆತ್ತಿದ್ದಾರೆ. ದೇವಾಲಯ ಶಿಲ್ಪಗಳಿಗೆ ತಮ್ಮ ಕಾಣ್ಕೆ ನೀಡಿದ್ದಾರೆ.

## ಉಪಯುಕ್ತ ಮಾಹಿತಿಗಳು

| | |
|---|---|
| ಶಿಲ್ಪ ಸಿದ್ಧಾಂತಿ ಸಿದ್ಧಲಿಂಗ ಸ್ವಾಮಿಗಳ ಕಾಲ | ೧೮೮೫ ರಿಂದ ೨-೫-೧೯೫೨. ೬೭ ವರ್ಷದ ಬದುಕು. |
| ವರ್ಣಶಿಲ್ಪಿ ವೆಂಕಟಪ್ಪನವರ ಕಾಲ | ೧೮೮೬ ರಿಂದ ೨೫-೫-೧೯೬೫. ೭೯ ವರ್ಷದ ಬದುಕು |
| ಶಿಲ್ಪಿ ನಾಗೇಂದ್ರ ಸ್ತಪತಿಗಳ ಬದುಕು | ೨೮-೧೨-೧೯೧೩ ರಿಂದ ೪-೭-೧೯೭೨. ೫೯ ವರ್ಷದ |
| ಶಿಲ್ಪಿ ಬಸವಣ್ಣ ಬಿ. | ೧೯೨೧ ರಿಂದ ೧೯೮೮ ೬೭. ವರ್ಷದ ಬದುಕು. |
| ಅರಮನೆ ನಿರ್ಮಾಣ ಕಾಲ | ಕಟ್ಟಡ ೧೮೯೭ರಲ್ಲಿ ಆರಂಭವಾಗಿ ೧೯೧೨ ನಿರ್ಮಾಣಪೂರ್ಣ |

ಅರಮನೆಗೆ ಕಲಾಕೃತಿಗಳ ರಚನಾಕಾಲ ಸು. ೧೯೨೦ರಿಂದ ೧೯೫೦ರವರೆಗೆ.

ಜಗನ್ಮೋಹನ ಅರಮನೆ ಸ್ಥಾಪನೆ ೧೯೦೦ರ ಸುಮಾರಿನಲ್ಲಿ.

**ಕಾಮಕಾಮೇಶ್ವರಿ ದೇವಾಲಯ ಉದ್ಘಾಟನೆ:** ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಯ ಪುತ್ರ ನಾಗೇಂದ್ರ ಸ್ತಪತಿನ ನಿರ್ಮಿತಮಿದಂ ಬಿಂಬಂ ಶಾಲಿವಾಹನ ಶಕಾಬ್ಧ : ೧೮೭೫ ಎಂಬುದಾಗಿ ಅಲ್ಲಿನ ನಂದಿಮೂರ್ತಿಯ ತಳಪೀಠದಲ್ಲಿ ಕೆತ್ತಲಾಗಿದೆ. (೧೯೫೪ನೇ ಇಸವಿ)

ಶ್ರೀ ಜಗದ್ಗುರು ಶೈವಶಿಲ್ಪಿ ಬ್ರಹ್ಮಶ್ರೀ **ಗುರುಕುಲದ ಪ್ರಾರಂಭೋತ್ಸವವು** ಶಾಲಿವಾಹನ ಶಕ ೧೮೭೧. ಶ್ರೀ ಸರ್ವದಾರಿ ಸಂವತ್ಸರ ಪಾಲ್ಗುಣ ಶು॥೭ ಸೋಮವಾರ ಶ್ರೀಮತ್ಕರ್ಣಾಟಕ ಸಿಂಹಾಸನಾಧೀಶರಾದ ಶ್ರೀ ಜಯಚಾಮರಾಜ ಮಹಾಪ್ರಭುವರ್ಯರ ದಿವ್ಯಾಮೃತ ಕರಕಮಲಗಳಿಂದ ನೆರವೇರಿಸಲ್ಪಟ್ಟಿತು ಎಂಬ ಶಿಲಾ ಕೆತ್ತನೆಯಿದ್ದು ಬಹುಭಾಗ ಈಗ ಪಾಳುಬಿದ್ದಿವೆ.

**ಅರಮನೆಯ ಪ್ರವೇಶದ್ವಾರಗಳು** ಒಟ್ಟು ಐದು, ಅವುಗಳಿಗೆಲ್ಲ ಒಂದೊಂದು ಹೆಸರಿಡಲಾಗಿದೆ.

ಪೂರ್ವಕ್ಕೆ – ಜಯಮಾರ್ತಾಂಡ

ಪಶ್ಚಿಮಕ್ಕೆ – ಬ್ರಹ್ಮಪುರಿ ಮತ್ತು ಕರಿಕಲ್ಲು ತೊಟ್ಟಿದ್ವಾರ

ಉತ್ತರಕ್ಕೆ – ಬಲರಾಮ – ಜಯರಾಮ

ದಕ್ಷಿಣಕ್ಕೆ – ವರಾಹ

ಅರಮನೆ ಒಳಗಿನ ಪ್ರಮುಖ ದೇವಾಲಯಗಳು – ಲಕ್ಷ್ಮೀರಮಣಸ್ವಾಮಿ, ಶ್ವೇತವರಾಹಸ್ವಾಮಿ, ತ್ರಿನೇಶ್ವರಸ್ವಾಮಿ, ಪ್ರಸನ್ನಕೃಷ್ಣಸ್ವಾಮಿ, ಕಿಲ್ಲೆ ವೆಂಕಟರಮಣಸ್ವಾಮಿ, ಭುವನೇಶ್ವರಿ ಮತ್ತು ಗಾಯತ್ರಿ ದೇವಾಲಯಗಳು.

ಭುವನೇಶ್ವರಿ ಸ್ಥಾಪನೆ ೧೯೫೧, ಅಲ್ಲಿನ ಶಿಲ್ಪಗೆಲಸ ಶಿಲ್ಪಿ ಸಿದ್ಧಾಂತಿ ಸಿದ್ಧಲಿಂಗ ಸ್ವಾಮಿಗಳವರದ್ದು.

ಗಾಯತ್ರಿ ಸ್ಥಾಪನೆ ೧೯೫೩, ಅಲ್ಲಿನ ಶಿಲ್ಪಗೆಲಸ ಸ್ವಾಮಿಗಳ ಶಿಷ್ಯ ಬಿ. ಬಸವಣ್ಣನವರದ್ದು.

ಈ ಎರಡು ದೇವಾಲಯಗಳು ಶ್ರೀ ಜಯಚಾಮರಾಜ ಒಡೆಯರರವರ ಕಾಲದಲ್ಲಾದವು.





## ಲೇಖಕರ ಪರಿಚಯ

ಚಿತ್ರ, ಶಿಲ್ಪ ಮತ್ತದರ ಸಾಹಿತ್ಯ ಈ ಮೂರು ಕ್ಷೇತ್ರಗಳಲ್ಲಿ ಅಪಾರವಾದ ಕೆಲಸ ಮಾಡಿರುವ ಶಿವಲಿಂಗಪ್ಪನವರು ಶಿಲ್ಪಗಳನ್ನು ಮಾಡುವಿಕೆಯಲ್ಲಿ ಕಲ್ಲು, ಲೋಹ, ದಾರುಗಳಂತಹ ಸಾಂಪ್ರದಾಯಿಕ ಮಾಧ್ಯಮಗಳೊರತಾದ ಇಂದಿನ ವಿಜ್ಞಾನದ ಪ್ರಗತಿಯ ಫಲದಿಂದಾಗಿ ಹೊಸಹೊಸ ಮಾಧ್ಯಮಗಳಾದ ಮರಳಚ್ಚು, ಥರ್ಮಕೋಲ್, ಫೈಬರ್‌ಗ್ಲಾಸ್, ಪಿವಿಸಿ ಪೈಪ್‌ಗಳಲ್ಲಿ ಸೃಜನಾತ್ಮಕ ಶಿಲ್ಪಗಳನ್ನು ರಚಿಸಿದ್ದು, ಅನೇಕ ಶಿಲ್ಪಗಳು ಪ್ರದರ್ಶನ ಕಂಡಿವೆ. ಇದಲ್ಲದೆ ಕಲೆ-ಕಲಾವಿದರನ್ನು ಕುರಿತಾದ ಲೇಖನಗಳು ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. "ನಮ್ಮ ಕಲಾವಿದರು" ಎಂಬ ಅಂಕಣ ಉದಯವಾಣಿ ಪತ್ರಿಕೆಯಲ್ಲಿ ನಾಲ್ಕು ವರ್ಷಕಾಲ ಪ್ರಕಟಣೆ ಕಂಡಿದೆ. ಅಲ್ಲದೆ ಲಲಿತಕಲಾ ಅಕಾಡೆಮಿ ಮತ್ತು ಶಿಲ್ಪಕಲಾ ಅಕಾಡೆಮಿಗಳಿಗೂ ಹಲವಾರು ಕಲಾವಿದರ ಸಾಧನೆ, ಕೃತಿ, ಜೀವನ ಬಿಂಬಿಸುವ ಕಲಾವಿದರ ಮಾಲಿಕೆ ಪುಸ್ತಕಗಳು ಹೊರಬಂದಿದೆ. ಕ.ಸಾ.ಪ. ದಿಂದಲೂ ಕರ್ನಾಟಕ ಕಲಾ ಬೆಳವಣಿಗೆಯ ಬಗ್ಗೆ ಸಮಗ್ರ ಮಾಹಿತಿ ನೀಡುವ ಪುಸ್ತಕ ಹೊರಬಂದಿದೆ. ಈ ಬಾರಿಯ ಬಸವಣ್ಣ ಶಿಲ್ಪಿಯ ಸಾಧನೆ, ಕೃತಿ, ಜೀವನ ಕುರಿತಾದ ಪುಸ್ತಕ ಶಿಲ್ಪಿಯ ಬಗ್ಗೆ ತಮ್ಮ ಅಭಿವ್ಯಕ್ತಿಯನ್ನು ಗಂಭೀರವಾಗಿ ಎಲ್ಲರಿಗೂ ಮುಟ್ಟುವ ರೀತಿಯಲ್ಲಿ ಮೂಡಿಬಂದಿದೆ.

ಶಿಲ್ಪಕಲಾ ಅಕಾಡೆಮಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಇದಲ್ಲದೆ ವಿವಿಧ ಸಮಿತಿಗಳಲ್ಲಿ ಪದಾಧಿಕಾರಿಗಳಾಗಿ ಕೆಲಸ ನಿರ್ವಹಿಸಿದ್ದು, ಆಚಾರ್ಯ ಚಿತ್ರಕಲಾಭವನದ ರೂವಾರಿಯಾಗಿ, ಪ್ರಾಚಾರ್ಯರಾಗಿ ದುಡಿದಿದ್ದಾರೆ. ಇವರಿಗೆ 2006-2007ನೇ ಸಾಲಿನ ಸುವರ್ಣ ಕರ್ನಾಟಕ ವರ್ಷದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಗೌರವ ಸನ್ಮಾನ ಇತ್ಯಾದಿಗಳು ಸಂದಿವೆ.

– **ವೆಂಕಟಾಚಲಪತಿ**